## From "Sevachetana" - Birthday Felicitation Volume - 1990

*Many are the ways of acquiring power and pelf, richest as well. But to win the hearts of men is a difficult task. My friend Kondajji Basappa did it in a marvellous way. His winning manners, his attitude of serving humanity won the hearts of people. What ever post he held he adorned.*

*As a scout leader he rendered yeoman service to the movement. How can one forget the improvements he made to the extensive and charming scout camps at Kondajji and Doddaballapur. He so mixed with the young scouts and guides in order to infuse the spirit of the movement into them and made them better citizens of this great land of ours. As a friend, he would give a helping hand to those in need, solve their problems to alliviate their pains and sufferings. He was truly a friend in need and a friend in deed.*

*How can one forget his help in promoting the establishment of a leper colony sponsored by the Mahatma Gandhi Kushta Chikitsa Sangha at Kondajji, when other organizations hesitated to acomodate it. Large is the tale of achievement of Kondajji in the service of humanity. May his soul rest in peace.*

- *Justice* **Mir Iqbal Husain**
*Former State Vigilance Commissioner*
*Vice-President, BS & G, Karnataka*

*The death of Mr. Kondajji Basappa has removed from Karnataka a keen and prominent person from the field of Scouting and Guiding.*

*Associated with this character building worldwide movement for a long time, he did much to revive it by intensifying its activities and extended it to colleges. He was successful in securing some influential incentives to scout masters as in the case of NCC, when I was DPI, his contribution to Panchayat Raj as State minister of Co-operation and as Deputy Minister of Health at the centre may also be recalled.*

*Above all his devotion to develop his village Kondajji with all possible facilities deserves commendation.*

**- S.V. Jevoor**
*Retired Director of Public Instruction, Bengaluru*

*We cannot forget how good he was to us particularly when I was posted to New Delhi and he was so kind as to allow us to stay in his Flat at South Avenue in 1971 for almost six months till I got my official quarters. During that period we used to meet him very often and all of us found him such a kind, helpful and generous person.*

*I am sure that with all the kindness shown by him to everybody and the services rendered by him to the community, he has passed to his eternal reward.*

**- F.T.R. Colaso**
*Inspector General of Police, Karnataka*

*One should always remember persons like Sri Kondajji Basappa who devoted himself for the cause of Rural development and Younger generation.*

*Throughout his life he served the society with missionary zeal and dedication.*

**- K.G. Maheswarappa**
*Member of Parliament (Rajyasabha), Davanagere*

## *From "Sevachetana" - Birthday Felicitation Volume - 1990*

*He was as dear to me as to his family members. His concern for the country and the development of its people was exemplary. His services as member of Parliament, Minister of State and the leadership he provided for the Scout movement are unforgettable. He had the qualities of Head and Heart and was loved by all.*

**- Dr. N.P. Patil**

*Director, Indian Institute of Socio Economic Studies*

*Bengaluru*

*Sri Kondajji Basappa has helped our Institute in many ways during his life time. We owe a great debt to him for all his support. His loss is not a loss only to the family but the whole country.*

**- Dr. G.N. Narayana Reddy**

*Former Director, NIMHANS*

*Bengaluru*

*Mr. Basappa was a friend for the lost 46 years. He is indeed a rare type of politician who stood for all that is ideal in politics. He is an embodiment of nobility, humility and goodness, dedicated to the service of humanity. Although he is no more, he lives in the hearts of thousands of people for all that he has done for the progress of society.*

**- Prof. T. Thippeswamy**

*Retired Principal*

*Govt. Arts College, Bengaluru*

*He was a great soul having rendered service to others in the hour of their grief and misfortune by patting on their back saying 'Don't worry, it is only a passing cloud, and a bright sunshine is bound to follow.' He was loved by all his family members, apart from being a friend to all. He was doing a 'Good Turn, to someone who came to him for help every day either to help him in his difficulties or find him a job, in the true Scout Spirit. I recall instances when someone was in trouble he would say "Come, let us go to Sri Basappa, he will help us get out of it".*

*Even as a Minister, he was not proud of his high office, but condescended to be of assistance to anyone who came to him for help, however low in social status he might be, be he a Harijan or of a Higher caste.*

**- T.A. Mohan**

*Retired Superintendent of Police*

*Besides being a noble and able soul, Sri Kondajji Basappa had carved out an enviable image as an All India figure.*

*His contributions to the Scout Guide Movement in the country in general and to the Karnataka State in particular will remain Monuments of par excellence.*

*I still remember the Glass House function where his Birthday was celebrated, and where he returned the purse of Rs. 1,00,000/- for the cause of Scout Movement.*

**- Prof. M. Suryanarayanappa**

*Principal, Vivekananda College, Puttur*

## *From "Sevachetana" - Birthday Felicitation Volume - 1990*

*Sri Kondajji Basappa took a very active part in the politics of our country and our state in particular. He was the Chief Scout Commissioner of the state for a number of years and as a true scout, he had placed 'service above self' as his guiding principle all his life. Thanks to his efforts in making his native village a Tourist Spot, providing it with many facilities, he was responsible to make the village Kondajji, a model village. The best way of keeping his memory alive is for the public to complete the remaining part of the work in his scheme of improvement to be finished as early as possible. It is indeed rare particularly these days to find a politician like Kondajji Basappa deeply involved in social work. He is no more; when shall we have another like him.*

**- S. Shivashankarappa**
*Hon. Secretary*
*Bapuji Educational Association, Davanagere*

*I had the privilege to work with him in the Scout & Guide Movement for nearly two decades first as State Chief Commissioner of Tamil Nadu and later as Chief Commissioner of Scouts, India. He was a worthy and beloved colleague. He was deeply devoted to the principles and practices of the Scout Movement and his dedicated services for the growth and expansion of the Scout & Guide Movement for over two decades in Karnataka will ever be remembered & Cherished. Indeed his career in the Movement constitutes the history of the Karnataka State Association for the past more than two decades. His zeal and steadfast devotion have borne truthful and tangible results. The improvements to the Doddaballapur camp cum training centre and the establishment of the Kondajji Camp site for Scouts & Guides are significant milestones and landmarks. Great and signal were his services to the Scout & Guide Movement. In his death the Movement has lost a stalwart and I a dear and distinguished colleague. His life and work will ever inspire and guide generations of Scouts and Guides to come.*

**- C.D. Natarajan**
*Former Member of Parliament (Rajyasabha)*
*Former Chief Commissioner for Scouts, India, New Delhi*

*His contribution to the field of education was laudable. His earnestness in promoting the welfare of the youth was commendable.*

*We all recognise that we continue to remember him by what he accomplished in his life.*

**- Dr. P. Paramasivaiah**
*Former Professor of Physics, Central College*
*Bangalore University*

# ಧರ್ಮಗುರುಗಳ ನುಡಿ ನಮನ

**ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು**
ಶ್ರೀ ವೀರಸಿಂಹಾಸನ ಸುತ್ತೂರು ಸಂಸ್ಥಾನ ಮಠ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಠ
ರಾಮಾನುಜ ರಸ್ತೆ, ಮೈಸೂರು–570 004

ದಿನಾಂಕ: 02.12.1982

ದಿನಾಂಕ: 14.11.1982ನೇ ಭಾನುವಾರ ಬೆಳಿಗ್ಗೆ 2.45ಕ್ಕೆ ಶಿವಸಾಯುಜ್ಯ ಹೊಂದಿದ ಶರಣ ಕೊಂಡಜ್ಜಿ ಬಸಪ್ಪನವರ ಶಾಂತಿ ಸಮಾರಾಧನೆಯನ್ನು ದಿನಾಂಕ 05.12.1982ರಂದು ಕೊಂಡಜ್ಜಿ ಗ್ರಾಮದಲ್ಲಿ ಏರ್ಪಡಿಸಿರುವ ವಿಷಯ ತಿಳಿಯಿತು. ರಾಷ್ಟ್ರಕ್ಕೆ, ರಾಜ್ಯಕ್ಕೆ ಅಪಾರ ಸೇವೆ ಸಲ್ಲಿಸಿ ಜನಪ್ರಿಯ ನಾಯಕರಾಗಿದ್ದಂತಹ ಕೊಂಡಜ್ಜಿ ಬಸಪ್ಪನವರ ಅಗಲುವಿಕೆಯು ಅವರನ್ನರಿತ ಎಲ್ಲರಿಗೂ ದುಃಖ ತರುವಂತಹ ಸುದ್ದಿಯಾಗಿದೆ.

ಈ ಸಂದರ್ಭದಲ್ಲಿ ಮೃತರ ಆತ್ಮಕ್ಕೆ ಚಿರಶಾಂತಿ ದೊರೆಯಲೆಂದು ಬಂಧು ವರ್ಗದವರಿಗೆ ದುಃಖ ಭರಿಸುವ ಶಕ್ತಿ ನೀಡಲೆಂದೂ ಹಾರೈಸುತ್ತೇನೆ.

**ಇತ್ಯಾಶಿಷಃ**

**ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು**
ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ

ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ
ಆದಿಚುಂಚನಗಿರಿ–571 418

ದಿನಾಂಕ: 30.11.1982

ಶರಣ ಕೊಂಡಜ್ಜಿ ಬಸಪ್ಪನವರು ದೈವಾಧೀನರಾದ ವಿಷಯ ತಿಳಿದು ಮನಸ್ಸಿಗೆ ತುಂಬಾ ನೋವಾಯಿತು.

ಶ್ರೀಯುತರು ನಾಡಿಗೆ ಸೇವೆ ಸಲ್ಲಿಸಿ ಅಮರರಾಗಿರುತ್ತಾನೆ. ಅವರ ನಿಧನದಿಂದ ನಾಡಿಗೆ ಅಪಾರ ನಷ್ಟವಾಗಿದೆ. ಶ್ರೀಯುತರ ಆತ್ಮಕ್ಕೆ ಭಗವಂತನು ಚಿರಶಾಂತಿ ಕೊಡಲೆಂದು ಹಾಗೂ ಅವರ ನಿಧನದಿಂದ, ಅವರ ಬಂಧು ಬಳಗ ಮತ್ತು ಮಿತ್ರರಿಗೆ ಉಂಟಾಗಿರುವ ದುಃಖವನ್ನು ಸಹಿಸುವ ಶಕ್ತಿಯನ್ನು ನೀಡಲೆಂದು ಹಾರೈಸುತ್ತೇವೆ.

**ಇತಿ ಶ್ರೀಮುಖ**

**ಶ್ರೀ ಮ.ನಿ. ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳವರು**
ತೋಂಟದಾರ್ಯ ಸಂಸ್ಥಾನ ಮಠ

ಡಂಬಳ–ಗದಗ
ಗದಗ

ದಿನಾಂಕ: 29.11.1982

ಕೊಂಡಜ್ಜಿ ಬಸಪ್ಪನವರು ಶಿವಾಧೀನರಾದ ವಿಷಯ ತಿಳಿದು ತುಂಬಾ ವಿಷಾದವಾಯಿತು.

ರಾಜಕೀಯ ಕೊಳಚೆಯಲ್ಲೂ ಕಮಲದಂತೆ ಮೇಲೆದ್ದು ಬಂದ ಕೊಂಡಜ್ಜಿ ಬಸಪ್ಪನವರಂತಹ ಸಾತ್ವಿಕರು ಇಂದು ಅಪರೂಪವಾಗುತ್ತಿದ್ದಾರೆ. ಅವರ ಅಗಲುವಿಕೆಯಿಂದ ನಾಡು, ಸಮಾಜ ಬಡವಾಗಿದೆ. ಅವರ ಅಗಲುವಿಕೆಯಿಂದಾದ ಸಂತಾಪವನ್ನು ಸಹಿಸುವ ಶಕ್ತಿಯನ್ನು ದೇವರು ದಯಪಾಲಿಸಲೆಂದು ಹಾರೈಸುತ್ತೇವೆ.

**ಇತ್ಯಾಶಿಷಃ**

**ಶ್ರೀ ಶ್ರೀ ವಿಶ್ವೇಶ್ವರತೀರ್ಥ ಸ್ವಾಮಿಗಳು**
ಶ್ರೀ ಪೇಜಾವರ ಮಠ
ಜಗದ್ಗುರು ಮಧ್ವಾಚಾರ್ಯ ಸಂಸ್ಥಾನ

ಉಡುಪಿ–576101
ದಕ್ಷಿಣ ಕನ್ನಡ

ದಿನಾಂಕ: 01.12.1982

ರಾಜಕೀಯದಲ್ಲಿ ಚಾರಿತ್ರ್ಯ ಸಂಪನ್ನ ಜೀವನವನ್ನು ನಡೆಸಿದ ಕೊಂಡಜ್ಜಿ ಬಸಪ್ಪನವರ ನಿಧನವು ನಮಗೆ ಅತ್ಯಂತ ಖೇದವನ್ನುಂಟು ಮಾಡಿದೆ. ಸ್ಕೌಟ್ ಕಾರ್ಯಕ್ರಮಗಳಲ್ಲಿ ಅವರ ಜೊತೆಗೆ ಒಂದೆರಡು ಸಲ ನಾವು ಭಾಗವಹಿಸಿದ್ದೆವು. ಇಂತಹ ನಿಷ್ಠಾವಂತ ಸಜ್ಜನ ಮುಂದಾಳುವಿನ ನಿಧನದಿಂದ ಕರ್ನಾಟಕಕ್ಕೆ ವಿಶೇಷ ಹಾನಿಯಾಗಿದೆ. ಚಿತ್ರದುರ್ಗ ಮತ್ತು ಸಿರಿಗೆರೆ ಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆಯುವ ಶಾಂತಿ ಸಮಾರಾಧನೆಯು ಒಳ್ಳೆಯ ರೀತಿಯಿಂದ ನಡೆಯಲಿ ದೇವರು ಅವರನ್ನು ಅನುಗ್ರಹಿಸಲಿ.

**ಇತಿ ಸಪ್ರೇಮ ನಾರಾಯಣ ಸ್ಮರಣೆಗಳು**

## ಅನಾಥಸೇವಾಶ್ರಮ ಟ್ರಸ್ಟ್

**ಮಲ್ಲಾಡಿಹಳ್ಳಿ**
**ಚಿತ್ರದುರ್ಗ ಜಿಲ್ಲೆ**

**ದಿನಾಂಕ: 08.11.1989**

'ರಾಷ್ಟ್ರದೇವೋ ಭವ'

ನನ್ನ ಆತ್ಮೀಯ ಬಂಧುಗಳಾದ ಶ್ರೀ ಕೊಂಡಜ್ಜಿ ಬಸಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸಲ್ಲಿಸಿರುವ ಸೇವೆ ಅಪಾರ. ಅವರು ಆ ಕ್ಷೇತ್ರದ ಸೇವಗಾಗಿ ತಮ್ಮನ್ನೇ ತಾವು ಅರ್ಪಣ ಮಾಡಿಕೊಂಡಿದ್ದರು. ಇಂತಹ ಮಹನೀಯರ 74ನೆಯ ಜನ್ಮದಿನೋತ್ಸವದ ಆಚರಣೆಯನ್ನು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ಟ್ರೈನಿಂಗ್ ಸೆಂಟರ್ ಕೊಂಡಜ್ಜಿ ಇದರ ಆಶ್ರಯದಲ್ಲಿ ಇದೇ 11.12.1989ನೇ ದಿನ ಏರ್ಪಡಿಸಲಿರುವುದನ್ನು ತಿಳಿದು ಅತ್ಯಂತ ಸಂತೋಷವಾಗಿದೆ. ಈ ಸುವರ್ಣ ಸನ್ನಿವೇಶದಲ್ಲಿ ಶ್ರೀ ಕೊಂಡಜ್ಜಿ ಬಸಪ್ಪನವರ ಕಂಚಿನ ಪ್ರತಿಮೆಯನ್ನು ಕೊಂಡಜ್ಜಿಯ ಸ್ಕೌಟ್ಸ್ ಮತ್ತು ಗೈಡ್ಸ್ ಕೇಂದ್ರದಲ್ಲಿ ಪ್ರತಿಷ್ಠಾಪಿಸಬೇಕೆಂದಿರುವುದನ್ನೂ ಮತ್ತು ಇದೇ ಸಂದರ್ಭದಲ್ಲಿ ಅವರ ಹೆಸರಿನಲ್ಲೊಂದು ಸಂಸ್ಮರಣ ಸಂಚಿಕೆಯನ್ನು ಪ್ರಕಟಿಸಬೇಕೆಂದಿರುವುದನ್ನೂ ಕೇಳಿ ಅತ್ಯಂತ ಆನಂದವಾಗಿದೆ.

ನನ್ನ ವಿಷಯದಲ್ಲಿ ಶ್ರೀ ಕೊಂಡಜ್ಜಿ ಬಸಪ್ಪನವರಿಗೆ ಅಪಾರ ಗೌರವ ಮತ್ತು ಪ್ರೇಮವಿತ್ತು. ಆದ್ದರಿಂದಲೇ ಅವರು ಜೀವಂತ ಇರುವಾಗ ಒಮ್ಮೆ ನನ್ನನ್ನು ಕೊಂಡಜ್ಜಿಯ ಆ ಕೇಂದ್ರಕ್ಕೆ ಕರೆದೊಯ್ದು ಅಂದಿನವರೆಗಾಗಿದ್ದ ಎಲ್ಲ ಉತ್ತಮ ಕಾರ್ಯವನ್ನು ತೋರಿಸಿದ್ದಲ್ಲದೆ ಮುಂದಿನ ಅವರ ಪ್ರಕೃತಿಪರ ಯೋಜನೆಯನ್ನೂ ವ್ಯಕ್ತಪಡಿಸಿದ್ದರು. ದೊಡ್ಡ ವ್ಯಕ್ತಿಯ ವ್ಯಕ್ತಿತ್ವಕ್ಕೆ ತಕ್ಕಂತಹ ದೊಡ್ಡ ಯೋಜನೆಯದು. ಅದು ಕಾರ್ಯರೂಪಕ್ಕೆ ಬರುವ ಮೊದಲೇ ಅವರು ನಮ್ಮನ್ನಗಲಿದುದು ಅದೊಂದು ವಿಧಿಯ ಲೀಲೆ.

ಅಂದವರು, ನನ್ನನ್ನು ಆ ಕೇಂದ್ರದಲ್ಲೇ ಬಂದಿದ್ದು ಅದನ್ನು ವಹಿಸಿಕೊಂಡು ಅದರ ಯೋಜನೆಯನ್ನು ಮುಂದುವರಿಸುವಂತೆ ಒತ್ತಾಯಿಸಿದ್ದರು. ಆದರೆ ನಾನು ಹೊತ್ತ ಹೊಣೆಯ ಈ ಅನಾಥ ಸೇವಾಶ್ರಮದ ಕಾರ್ಯಭಾರದಿಂದಾಗಿ ನಾನದಕ್ಕೆ ಸಮ್ಮತಿಸಲಿಲ್ಲ. ನನ್ನ ಅಸಮ್ಮತಿಯ ಕಾರಣ ಅವರಿಗೆ ಅಹುದೆನಿಸಿತ್ತು.

ಇತ್ತೀಚೆಗೆ ಅಲ್ಲಿ ಕುಷ್ಠರೋಗಿಗಳ ಕೇಂದ್ರ, ವಿವಿಧ ಅಮೂಲ್ಯ ವನಸ್ಪತಿಗಳ ಅರಣ್ಯವನ್ನು ನಿರ್ಮಿಸಲು ಯೋಜನೆ ನಡೆಯುತ್ತಿರುವುದಾಗಿ ನಾನು ಕರ್ಣಾಕರ್ಣಿಯಾಗಿ ಕೇಳಿದ್ದೇನೆ. ಇಂತಹ ಎಲ್ಲ ಪ್ರಕೃತಿ ಸೂಚಕ ಕಾರ್ಯಗಳಿಗೂ ಕೊಂಡಜ್ಜಿಯ ಸೇವಾ ಕ್ಷೇತ್ರವು ನಿಜವಾಗಿಯೂ ಯೋಗ್ಯವಾದ ಸ್ಥಳವೆಂಬುದರಲ್ಲಿ ಅನುಮಾನವೇ ಇಲ್ಲ. ವಿಶಾಲವೂ ಪವಿತ್ರವೂ ಆದ ಆ ಕ್ಷೇತ್ರದಲ್ಲಿ ನಿಯೋಜಿತ ಕಾರ್ಯಗಳು ನಡೆದು ಶ್ರೀ ಕೊಂಡಜ್ಜಿಯವರ ಆತ್ಮಕ್ಕೆ ಶಾಂತಿ ದೊರೆಯಲೆಂದು ನನ್ನ ಹಾರ್ದಿಕ ಹಾರೈಕೆ.

**- ಬಾ. ರಾಘವೇಂದ್ರ ಸ್ವಾಮೀಜಿ**

ಕರ್ನಾಟಕದ ರಾಜಕೀಯ ಮುಖಂಡರೆಂದು ಪ್ರಸಿದ್ಧಿ ಪಡೆದೂ ಕೊಂಡಜ್ಜಿ ಬಸಪ್ಪನವರು ಸಜ್ಜನರಾಗಿಯೇ ಉಳಿದರು. ಲೋಕಹಿತ ಸಾಧನೆಯಲ್ಲಿ ನಿರತರಾಗಿದ್ದರು. ಅವರು ವೀರಶೈವ ಸಮಾಜಕ್ಕೆ, ಕನ್ನಡ ನಾಡಿಗೆ ಅಚ್ಚುಮೆಚ್ಚಿನ ವ್ಯಕ್ತಿಯಾಗಿದ್ದರು. ರಚನಾತ್ಮಕ ಕಾರ್ಯಗಳ ಮೂಲಕ ರಾಷ್ಟ್ರೀಯತೆಯನ್ನು ವ್ಯಕ್ತಪಡಿಸಿದರು. ನಾಡಿನ ಜನತೆಗೆ ಮೌಲಿಕ ಸೇವೆ ಸಲ್ಲಿಸಿದರು.

**- ಪ್ರೊ. ಸ.ಸ. ಮಾಳವಾಡ**

ಕೀರ್ತಿಕಾಯರಾದ ಕೊಂಡಜ್ಜಿ ಬಸಪ್ಪನವರು ಈ ಕಾಲದ ಪವಿತ್ರಾತ್ಮರಲ್ಲಿ ಒಬ್ಬರು; ರಾಜಕೀಯದಲ್ಲಿದ್ದೂ ಪರಿಶುದ್ಧ ಚಾರಿತ್ರ್ಯವನ್ನು ಉಳಿಸಿಕೊಂಡಿದ್ದ, ಬೆಳೆಸಿಕೊಂಡಿದ್ದ ವಿರಳ ವ್ಯಕ್ತಿಗಳಲ್ಲಿ ಒಬ್ಬರು. ಮಾತಿಗಿಂತ ಕೃತಿಗೆ ಮಹತ್ವವನ್ನು ನೀಡಿದ ಅಪರೂಪದ ನಾಯಕರಲ್ಲಿ ಒಬ್ಬರು.

**- ಡಾ. ಸಿದ್ಧಯ್ಯ ಪುರಾಣಿಕ್**

ಶ್ರೀ ಕೊಂಡಜ್ಜಿ ಬಸಪ್ಪನವರಂಥ ಸಜ್ಜನರನ್ನು ಇಂದಿನ ದಿನಗಳಲ್ಲಿ ಕಾಣುವುದು ಕಠಿಣ. ನಮ್ಮ ಮಿತ್ರರಾದ ಟಿ.ಎ. ಪೈ ಅವರಲ್ಲಿ ಮೊದಲು ಕಂಡೆ; ಆಮೇಲೆ ಸ್ಕೌಟ್ ನೇತಾರರ ನೆಲೆಯಲ್ಲಿ ಒಮ್ಮೆ ಕಂಡೆ; ಹೀಗೆ ಇನ್ನೂ ಒಂದೆರಡು ಸಲ ನೋಡಿರಬಹುದು. ಅವರ ಮೇಲೆ ಏಕರೀತಿಯಾದ ಅಭಿಮಾನವನ್ನು ಅವರ ಸಹವರ್ತಿಗಳು ಇರಿಸಿಕೊಂಡಂತೆ ಅನಿಸಿತು. ಅಧಿಕಾರ ಇರಲಿ ಬಿಡಲಿ ಒಂದೇ ಸಮನಾಗಿ ಬಾಳುವೆ ಮಾಡಿದ ಆ ಹಿರಿಯರು ಇನ್ನಿಲ್ಲ; ಅವರ ನೆನಪು ನಮಗೆ ಸದಾ ಹಸಿರಾಗಿ ಉಳಿಯುವುದು ಸಹಜ.

**- ಕು.ಶಿ. ಹರಿದಾಸಭಟ್ಟ**

ಶ್ರೀ ಕೊಂಡಜ್ಜಿಯವರೂ ನಾನು ಕಳೆದ 50 ವರ್ಷಗಳಿಗೆ ಮೇಲ್ಪಟ್ಟು ಸ್ನೇಹಿತರು. ಅವರ ನಗುಮುಖ, ಸರಳ ಜೀವನ ನಾನು ಎಂದಿಗೂ ಮರೆಯಲಾರೆ.

ಅವರು ಈಗಿನ ರಾಜಕೀಯದಲ್ಲಿದ್ದರೂ ಇತರೆ ರಾಜಕಾರಣಿಗಳಂತೆ ಯಾವ ದುರ್ಗುಣಗಳಿಗೂ ತುತ್ತಾಗದೆ ಕೊನೆಯವರೆಗೂ ಉದಾತ್ತ ಜೀವನ ನಡೆಸಿದರು.

ಅವರು ಬಹಳ ಕಾಲ ಬಾಳಿ ಸಮೂಹದಲ್ಲಿದ್ದು ಉನ್ನತ ಪದವಿ ಗೌರವಗಳನ್ನು ಪಡೆದು ನಮ್ಮೆಲ್ಲರ ಗೌರವಕ್ಕೆ ಪಾತ್ರರಾಗಿದ್ದಾರೆ ಮತ್ತು ನಿತ್ಯಜೀವನದಲ್ಲಿ ಸರಳ ಜೀವನ ನಡೆಸಿ ನಿಜವಾಗಿಯೂ ಸ್ಕೌಟ್ ಆಗಿದ್ದರು.

ಬಡವರು ಬಲ್ಲಿದರೆನ್ನುವ ಯಾವ ಭೇದವೂ ಇಲ್ಲದೆ ತಮ್ಮ ಕೈಲಾದ ಮಟ್ಟಿಗೆ ನಿರ್ವಂಚನೆಯಿಂದ ಸಹಾಯ ಮಾಡುತ್ತಿದ್ದರು. ಇದೊಂದು ಅವರ ದೊಡ್ಡ ಗುಣ! ಅವರ ಮರಣಾನಂತರ ಅವರ ಪಾರ್ಥಿವ ಶರೀರಕ್ಕೆ ಬೆಂಗಳೂರಿನಿಂದ ಕೊಂಡಜ್ಜಿಯವರಿಗೂ ಸಾವಿರಾರು ಜನರು ಅವರಿಗೆ ತೋರಿಸಿದ ಗೌರವವೇ ಇದಕ್ಕೆ ಸಾಕ್ಷಿ. ಇಂತಹ ಗೌರವ ಎಷ್ಟು ಜನರಿಗೆ ಸಿಗಬಲ್ಲದು!

**- ಜಿ. ಚೆನ್ನಪ್ಪ**

**ನಿವೃತ್ತ ಸರ್ಕಾರಿ ಸಹಾಯಕ ಅಡ್ವೋಕೇಟ್ ಜನರಲ್, ಬೆಂಗಳೂರು**

ದಿ. ಕೊಂಡಜ್ಜಿ ಅವರಿಗೂ ನನಗೂ ಸುಮಾರು ಮೂವತ್ತೆಂಟು ವರ್ಷಗಳ ಪರಿಚಯ. ರಾಜಕೀಯದಲ್ಲಿದ್ದು ಕೈಬಾಯಿಗಳನ್ನು ಪರಿಶುದ್ಧವಾಗಿಟ್ಟುಕೊಂಡಿದ್ದ ಕೇವಲ ಕೆಲವೇ ವ್ಯಕ್ತಿಗಳಲ್ಲಿ ಅವರೊಬ್ಬರು. ರಾಜ್ಯ ಮತ್ತು ಕೇಂದ್ರದಲ್ಲಿ ಮಂತ್ರಿಗಳಾಗಿದ್ದಾಗಲೂ ಅವರಿಗೆ ಹುಟ್ಟು ಗುಣವಾದ ಸ್ನೇಹಪರತೆ, ಆತ್ಮೀಯತೆಯನ್ನು ಅವರು ಎಂದಿಗೂ ಕೈ ಬಿಡಲಿಲ್ಲ. ಲೋಕಕ್ಕೆ ಮಾದರಿ ಆಗುವಂತೆ ಬದುಕಿದ ಸಾರ್ಥಕ ಜೀವನ ಅವರದು. ಮನುಷ್ಯನಾಗಿ ಹುಟ್ಟಿದ ಮೇಲೆ ಸಾಧಿಸಬೇಕಾದ್ದು ಇದೇ ತಾನೆ?

ಶ್ರೀ ಕೊಂಡಜ್ಜಿ ಅವರು ಜಿಲ್ಲಾ ಬೋರ್ಡ್ ಅಧ್ಯಕ್ಷರಾದಾಗ ಜಿಲ್ಲೆಯ ಜನರ ಅನುರಾಗವನ್ನು ಗಳಿಸಿಕೊಂಡರು. ರಾಜ್ಯದ ಮಂತ್ರಿಯಾಗಿದ್ದಾಗ ಈ ರಾಜ್ಯದ ಪ್ರಜೆಗಳ ಪ್ರೇಮ ಗಳಿಸಿಕೊಂಡರು. ಕೇಂದ್ರದ ಮಂತ್ರಿಯಾಗಿದ್ದಾಗ ಭರತಖಂಡದ ಜನರ ಪ್ರೀತಿಗೆ ಪಾತ್ರರಾದರು. ಹೀಗೆ ಎಲ್ಲರಿಗೂ ಬೇಕಾದವರಾಗಿ ಬದುಕಿದವರು ಬಹುವಿರಳ. ಶತ್ರುಗಳೇ ಇಲ್ಲದ ಪವಿತ್ರ ಜೀವನ ಅವರದು. ಅಂಥವರು ನನ್ನ ಆತ್ಮೀಯರೂ ಹಿರಿಯ ಸ್ನೇಹಿತರೂ ಆಗಿದ್ದರೆಂಬುದು ನನ್ನ ಬಾಳಿನಲ್ಲಿ ಒಂದು ಸವಿನೆನಪು.

**- ಕೋ. ಚನ್ನಬಸಪ್ಪ**

**ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು**

ಅವರದು ಮಹಾಚೈತನ್ಯ, ಅದಮ್ಯ ಆತ್ಮವಿಶ್ವಾಸ, ನಿಷ್ಕಲ್ಮಶ ಹೃದಯ. ಸದಾಸೇವೆ ಮಾಡಬೇಕೆಂಬ ಕೌತುಕ. ಸೌಜನ್ಯಮೂರ್ತಿ. ಬಡವಬಲ್ಲಿದನೆಂಬ ಭೇದ ಭಾವವನ್ನೇ ಅರಿಯದ ಅಜಾತ ಶತ್ರು. ಸ್ನೇಹಮಯಿ, ಮಕ್ಕಳ ಪ್ರೇಮಿ, ದೈವಭಕ್ತರು. ಇಂತಹ ಉದಾತ್ತ ಗುಣಗಳ ಸಾಕಾರ ಮೂರ್ತಿಯಾಗಿದ್ದ ನಮ್ಮ ನೆಚ್ಚಿನ ನಾಯಕರು ಯುಗಪುರುಷರು, ಇದು ಉತ್ಪ್ರೇಕ್ಷೆಯಲ್ಲ ಹೃದಯಾಂತರಾಳದಿಂದ ಬರುತ್ತಿರುವ ವಾಣಿ.

ನನ್ನ ಯೋಗಾಯೋಗದಿಂದ ಅವರ ಹುಟ್ಟೂರಾದ ಕೊಂಡಜ್ಜಿಯಲ್ಲಿ ಸುಮಾರು ಒಂದು ವರ್ಷ ಕಾಲ ವಾರ್ಡನ್ ಕೆಲಸ ಮಾಡುವ ಅವಕಾಶ ದೊರೆತಿತ್ತು. ದಾವಣಗೆರೆಯ ಪ್ರವಾಸಿ ಮಂದಿರದಲ್ಲಿ ಅವರು ತಂಗುತ್ತಿದ್ದಾಗ ಅವರೊಡನೆ ಇರುತ್ತಿದ್ದೆ. ಒಂದು ಸಾರಿ ಅವರ ಸಂಗಡ ಶಿವಮೊಗ್ಗ ಜಿಲ್ಲೆಯ ಶಾಸಕರು ಇದ್ದರು. ಶ್ರೀ ಕೊಂಡಜ್ಜಿಯವರು ಕಾಂಗ್ರೆಸ್ ಪಕ್ಷದವರು. ಅವರ ಸ್ನೇಹಿತ ಶಾಸಕರು ವಿರೋಧ ಪಕ್ಷದವರು. ಶ್ರೀ ಕೊಂಡಜ್ಜಿಯವರು ಕೊಠಡಿಯಿಂದ ಹೊರಕ್ಕೆ ಹೋದಾಗ ಪಕ್ಕದ ಮಂಚದಲ್ಲಿ ವಿಶ್ರಮಿಸುತ್ತಿದ್ದ ಶಾಸಕರು ನನ್ನೊಡನೆ "ಶ್ರೀ ಕೊಂಡಜ್ಜಿಯವರು ನಮ್ಮ ಪಕ್ಷದವರಲ್ಲ. ಆದರೂ ಅವರಲ್ಲಿ ಎಲ್ಲ ಪಕ್ಷದವರೂ ಗೌರವ, ಆದರ, ವಿಶ್ವಾಸ ಭಾವನೆಗಳನ್ನು ಹೊಂದಿದ್ದಾರೆ. ಅವರು ಎಲ್ಲ ಪಕ್ಷಗಳಿಗೂ ಬೇಕಾದವರು" ಎಂದರು. ನಾನು ಉತ್ತರಿಸಿದೆ– "ಅವರಲ್ಲಿ ದೇವತಾಗುಣಗಳೂ ಇವೆ, ಅವರಿಗೆ ಶತ್ರು–ಮಿತ್ರರೆಂಬ ಭೇದ ಭಾವವಿಲ್ಲ. ನಮ್ಮ ಸ್ಕೌಟ್ ಸಂಸ್ಥೆಯ ಆದರ್ಶವನ್ನು ಕೃತಿಯಲ್ಲಿ ತೋರುತ್ತಿರುವ ಧೀಮಂತ ವ್ಯಕ್ತಿ". ಇದು ಎಂದೆಂದಿಗೂ ನನ್ನ ಸ್ಮೃತಿ ಪಟಲದಲ್ಲಿ ಅಚ್ಚಳಿಯದೆ ನಿಂತಿದೆ.

**- ಕೆ. ಕೃಷ್ಣಮೂರ್ತಿ**

**ಎಲ್.ಟಿ. (ಕಬ್ಸ್), ಮಂಡ್ಯ**

ಶ್ರೀ ಕೊಂಡಜ್ಜಿ ಅವರ ನಿಧನದಿಂದ ರಾಷ್ಟ್ರ ಅದರಲ್ಲಿ ಕರ್ನಾಟಕದ ಜನತೆ ಒಬ್ಬ ಉತ್ತಮ ಸಮಾಜ ಸೇವಾಕರ್ತನನ್ನು ಕಳೆದುಕೊಂಡಂತಾಗಿದೆ. ಕೊಂಡಜ್ಜಿಯವರು ಅತ್ಯಂತ ಪ್ರಾಮಾಣಿಕತೆಯಿಂದ ಜನಸೇವೆ ಮಾಡುತ್ತಿದ್ದುದು ನಮ್ಮ ಮನಃಪಟಲದಲ್ಲಿ ನಿತ್ಯ ಹಸಿರು. ಮೃತರ ಆತ್ಮಕ್ಕೆ ಭಗವಂತನು ಶಾಂತಿ ಕೊಡಲಿ ಎಂದು ಪ್ರಾರ್ಥಿಸುತ್ತೇನೆ.

**- ಹೆಚ್.ಡಿ. ದೇವೇಗೌಡ**

**ವಿಧಾನಸಭಾ ಸದಸ್ಯರು, ಬೆಂಗಳೂರು**

ಭಾರತ ಸರ್ಕಾರದ ಮಾಜಿ ಆರೋಗ್ಯ ಉಪಸಚಿವರೂ, ಲೋಕಸಭಾ ಸದಸ್ಯರೂ, ಬಾಪೂಜಿ ವಿದ್ಯಾ ಸಂಸ್ಥೆಯ ಸದಸ್ಯರೂ ಆಗಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರ ಅಕಾಲ ಮೃತ್ಯು ನನಗೆ ಅತ್ಯಂತ ದುಃಖವನ್ನುಂಟು ಮಾಡಿದೆ. ರಾಜ್ಯ ಹಾಗೂ ರಾಷ್ಟ್ರಮಟ್ಟದ ರಾಜಕೀಯದಲ್ಲಿ ಶ್ರೀಯುತರ ಸೇವೆ ಅವಿಸ್ಮರಣೀಯ. ಸುಮಾರು ಎರಡು ದಶಕಗಳವರೆಗೆ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮುಖ್ಯ ಕಮೀಷನರ್ ಆಗಿ ಶ್ರೀ ಕೊಂಡಜ್ಜಿಯವರು ನಿಸ್ವಾರ್ಥ ಸೇವೆ ಸಲ್ಲಿಸಿದ್ದಾರೆ. ಹುಟ್ಟೂರನ್ನು ಒಂದು ಪ್ರೇಕ್ಷಣೀಯ ಸ್ಥಳವನ್ನಾಗಿ ಪರಿವರ್ತಿಸಲು ಅವರ ಅವಿಶ್ರಾಂತ ಶ್ರಮ ನಮ್ಮ ಕಣ್ಮುಂದೆ ಅಚ್ಚ ಹಸಿರು.

ಅವರ ಜೀವಂತ ಕಾಲದಲ್ಲಿ ಬಾಪೂಜಿ ವಿದ್ಯಾ ಸಂಸ್ಥೆ ಒಬ್ಬ ಮಹಾನ್ ಮಾರ್ಗದರ್ಶಕನನ್ನು ಪಡೆದಿತ್ತು ಎಂಬುದನ್ನು ನಾನು ಯಾವಾಗಲೂ ಸ್ಮರಿಸುತ್ತೇನೆ.

**ಶ್ಯಾಮನೂರು ಶಿವಶಂಕರಪ್ಪ**
**ಗೌರವ ಕಾರ್ಯದರ್ಶಿ, ಬಾಪೂಜಿ ವಿದ್ಯಾ ಸಂಸ್ಥೆ, ದಾವಣಗೆರೆ**

---

ಶ್ರೀಯುತರು ಸಾಮಾಜಿಕ, ಸಾರ್ವಜನಿಕ ಹಾಗೂ ರಾಜಕೀಯ ರಂಗದಲ್ಲಿ ಸಲ್ಲಿಸಿರುವ ನಿಸ್ವಾರ್ಥ ಸೇವೆ ಜನಮನಗಳಲ್ಲಿ ಸ್ಮರಣೀಯ. ರಾಜ್ಯ ಸ್ಕೌಟ್ ಬೆಳವಣಿಗೆಯಲ್ಲಿ ಇವರ ಪಾತ್ರ ಹಿರಿದು.

**- ವೀರಭದ್ರಪ್ಪ ಎಂ. ಚಿಗಟೇರಿ**
**ವಾಣಿಜ್ಯೋದ್ಯಮಿಗಳು, ದಾವಣಗೆರೆ**

---

ವಿಶ್ವಾದ್ಯಂತ ಕರ್ನಾಟಕ ಸ್ಕೌಟ್–ಗೈಡ್ ಪತಾಕೆಯನ್ನು ವಿಜೃಂಭಿಸುತ್ತಿದ್ದ, ಪ್ರಭಾವಪೂರ್ಣ, ಸ್ಫೂರ್ತಿದಾಯಕ ಮಂಗಳ ಕಳಸವು (ಅನಿರೀಕ್ಷಿತವಲ್ಲದಿದ್ದರೂ) ಇಷ್ಟು ಬೇಗ ಹಠಾತ್ತನೆ ಕುಸಿದು ಬೀಳುವುದನ್ನು ನಾವು ಯಾರೂ ನಿರೀಕ್ಷಿಸಿರಲಿಲ್ಲ. ತೀರ್ಥರೂಪ ಕೊಂಡಜ್ಜಿ ಬಸಪ್ಪನವರ ನಿಧನದಿಂದ ನಿಮ್ಮ ಕುಟುಂಬದವರಿಗೆ ಅದರಲ್ಲೂ ಮುಖ್ಯವಾಗಿ ಪೂಜ್ಯಮಾತೆಯವರಿಗೆ ಆಗಿರುವ ದುಃಖಕ್ಕೆ ನನ್ನ ಮತ್ತು ನನ್ನ ಮನೆಯ ಎಲ್ಲರ ಹಾಗೂ ಕರ್ನಾಟಕದ ಸಮಸ್ತ ಮರಿಗಳ ಸಂತಾಪಗಳು. ಅವರ ಸಮಾಜ ಸೇವೆ, ಹುಟ್ಟಿದೂರಿಗೆ ಕೊಟ್ಟಿರುವ ಕೊಡುಗೆ ಪವಿತ್ರ ಶಾಸನ ಸಮಾನವಾದುದು.

**- ಎಂ. ವೆಂಕಟಕೃಷ್ಣಪ್ಪ, ಎಲ್.ಟಿ.(ಕಬ್ಸ್)**
**ಕಬ್ ವಿಭಾಗದ ಹಿರಿಯ ನಾಯಕರು, ಬೆಂಗಳೂರು**

# ಆತ್ಮೀಯ ಅಭಿನಂದನೆ

ಬುಡ ಮೆಟ್ಟಿ ತುದಿ ಮುಟ್ಟಿ, ಎದೆ ತಟ್ಟಿದವರುಂಟು
ಬುಡವಲುಗಿ ತುದಿಯೊಣಗೆ, ಕುಸಿದು ಬಿದ್ದವರುಂಟು,
ಆದರೆ,
ಮರದ ತುದಿ ಎಷ್ಟಿದೆಯೊ ಅಷ್ಟೆ ಎತ್ತರ ಬೆಳೆದು,
ನೆಲದ ಮೇಲೆಯೆ ನಿಂತು ತುದಿಯ ಮುಟ್ಟಿದಿರಿ ನೀವು!
ನಿಮ್ಮ ರೀತಿಯೇ ಬೇರೆ–
ಗೆದ್ದ ಹಿಗ್ಗಿಲ್ಲ; ಸೋತ ಸಂಕಟವಿಲ್ಲ!
ಅಹುದು;
ನಿಮ್ಮ ಮುಖ ಅಮಾಯಕ, ಮಾತು ಸೌಜನ್ಯಪೂರ್ಣ.
ಸ್ನೇಹಕ್ಕೆ ಹೇಳಿ ಮಾಡಿದ ಜೀವ, ಅನ್ಯೋನ್ಯಭಾವ!
ಕಂಡ ವಸಂತಗಳ ಸಂಖ್ಯೆ ಆರು ಹತ್ತರ ಮೇಲೆ
ಉಂಡ ಕಹಿ, ಸಿಹಿಗಿಂತಲೂ ಹೆಚ್ಚು–
ಅದೆ ನಿಮ್ಮ ಗೆಲುವಿನ ಗುಟ್ಟು!
ಈಗ,
ನಿಮಗೆ ಆತ್ಮೀಯ ಅಭಿನಂದನೆ;
ನೂರು ವಸಂತಗಳ ಕಾಣಲೆಂಬ ಬಯಕೆಯೊಡನೆ!

**- ಗೊ.ರು. ಚನ್ನಬಸಪ್ಪ**

**("ಕೊಂಡಜ್ಜಿ" – ಅಭಿನಂದನ ಗ್ರಂಥ, 1976)**

## ಸ್ಕೌಟ್ ಪ್ರತಿಜ್ಞೆ

ನಾನು ನನ್ನ ಕೈಲಾದ ಮಟ್ಟಿಗೆ, ದೇವರಿಗೂ, ದೇಶಕ್ಕೂ ನನ್ನ ಪಾಲಿನ ಕರ್ತವ್ಯ ಪಾಲಿಸುತ್ತೇನೆ. ಇತರರಿಗೆ ಸಹಾಯ ಮಾಡುತ್ತೇನೆ; ಮತ್ತು ಸ್ಕೌಟ್ ನಿಯಮದಂತೆ ನಡೆದುಕೊಳ್ಳುತ್ತೇನೆ ಎಂದು ಆತ್ಮ ಸಾಕ್ಷಿಯಾಗಿ ಪ್ರತಿಜ್ಞೆ ಮಾಡುತ್ತೇನೆ.

**- ಬೇಡನ್ ಪೊವೆಲ್**

# ಜನ್ಮಶತಮಾನೋತ್ಸವ ಸ್ಮರಣೆ

**ಬೇಡರೆಡ್ಡಿಹಳ್ಳಿ ಪಂಪಣ್ಣ**
ಮಾಜಿ ಕಾರ್ಯದರ್ಶಿ
ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು
ಸಂಗ್ರಹ : **ಎಸ್.ಕೆ. ಪ್ರಭಾ,** ಎಲ್.ಟಿ.(ಗೈ)
ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್ಸ್), ಕರ್ನಾಟಕ

ಎತ್ತರವು ಹೆಚ್ಚಲ್ಲ, ಕುಳ್ಳಂತು ಇವರಲ್ಲ
ಎಣ್ಣೆಗೆಂಪಿನ ಬಣ್ಣ ತುಂಬು ಚೆಲುವ
ಮುಖದಲ್ಲಿ ಮುಗುಳ್ನಗೆ ಮುಗ್ಧತೆಯ ಶಿಶುಭಾವ
ಸೌಜನ್ಯ ಸಜ್ಜನಿಕೆ ಭಾವ ವಿಭವ!

ಬಯಲು ಸೀಮೆಯ ಮಡಿಲ ಕೊಂಡಜ್ಜಿ ಕಿರುಗ್ರಾಮ
ಬಹುಭಾಗ ಬೋಳು ನೆಲ-ಕೃಷಿಯ ಬದುಕು
ಸಾತ್ವಿಕರ ಮನೆತನದ ನಿಂಗಪ್ಪ ಹಾಲಮ್ಮ
ಇಲ್ಲಿ ದಂಪತಿ-ಧನ್ಯ ಬಾಳು ನಿಜಕು.

ಸರ್ವಮಂಗಳೆಯ ಧೀಶಕ್ತಿಗೆ
ಅರ್ಪಿಸಿಕೊಂಡರಿ ನೀವು ಜನಸೇವೆಗೆ
ಎಂಟು ಮಕ್ಕಳ ಬೆಳೆಸಿ ಮನೆಯ ನಡೆಸಿ
ಹೆಜ್ಜೆಹಾಕಿದ ಸಾಧ್ವಿಗೆ ನಮ್ಮ ನಮನ!

ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಿ
ದುಡಿದರು, ಜನ ಮತನೀಡಿದರು
ರಾಜ್ಯ ಕೇಂದ್ರಗಳಲಿ ಮಂತ್ರಿಯಾದರು
ಜನಸೇವೆಗೈದರು ನಿಸ್ವಾರ್ಥದಿಂದಲಿ!

ವಿಶ್ವವ್ಯಾಪ್ತಿಯ ಪಡೆದ ಸ್ಕೌಟ್ ಗೈಡ್ ಸಂಸ್ಥೆ
ರಾಷ್ಟ್ರಾಭಿಮಾನ ಬೆಳೆವ ತಾಣ
ನೈಜ ರಾಷ್ಟ್ರಪ್ರೇಮಿ ನಮ್ಮ ಶ್ರೀ ಕೊಂಡಜ್ಜಿ
ಅದಕೆ ಒಲಿದು ಬೆಳೆದ ನಮ್ಮ ಕೊಂಡಜ್ಜಿ!

ನೂರುವರುಷ ತುಂಬಿದೆ ಹುಟ್ಟಿ ನೀವು
ನೂರರ ನಿಮ್ಮ ಹುಟ್ಟುಹಬ್ಬದ ಸ್ಮರಣೆಯಲ್ಲಿ
ಬೆಳಗುತಿದೆ ರಾಷ್ಟ್ರ ಸ್ಕೌಟ್-ಗೈಡ್ ಜ್ಯೋತಿ
ನಿಮ್ಮಯ ಸ್ಫೂರ್ತಿಯಾ ತೈಲದಿಂದ!

# ನಿತ್ಯ ಜ್ಯೋತಿ



ಕು|| ಪ್ರೇಮಾ ಜ. ಮಂಗಳೂರು
ಎಲ್.ಟಿ. (ಗೈಡ್ಸ್), ಧಾರವಾಡ

ಕನ್ನಡ ಸ್ಕೌಟ್‌ಗೈಡ್ ಚೇತನ ಕೊಂಡಜ್ಜಿ ಬಸಪ್ಪ
ಮಕ್ಕಳ ದಿನಾಚರಣೆಯೆಂದೇ ಅಗಲಿದಿರಪ್ಪ
ಕೊಂಡಜ್ಜಿ ಗುಡ್ಡದಲ್ಲೇ ಅಡಗಿಹೆಯಪ್ಪ
ಸ್ಕೌಟ್‌ಗೈಡ್ ಇದ್ದಲ್ಲಿ ನೋಡುವೆಯಪ್ಪ.

ಕೊಂಡಜ್ಜಿಯ ಸತ್ಪುತ್ರ ಕನ್ನಡದ ಕುವರ
ಕಾಣಿಕೆಯ ಕೊಟ್ಟಿರುವೆ ಸ್ಕೌಟ್‌ಗೈಡ್ ಶಿಬಿರ
ಷಷ್ಠ್ಯಬ್ದಿ ಪೂರ್ತಿಗೆ ಬಂದ ಉಡುಗೊರೆ
ಸಂಸ್ಥೆಗೆ ನೀಡಿದ ದಾನಶೂರ.

ಮುತ್ಸದ್ದಿ ಮೃದುಭಾಷಿ ಕೊಂಡಜ್ಜಿ ಬಸಪ್ಪ
ಮುಗುಳುನಗೆಯ ಮೋಡಿ ಮಾಡಿದೆಯಪ್ಪ
ದಾನಿಗಳನೆಳತಂದು ಶಿಬಿರ ಬೆಳೆಸಿದೆಯಪ್ಪ
ನೀ ಕೊಟ್ಟ ಕೊಡುಗೆ ಸತ್ಪಾತ್ರ.

ನಿಸ್ವಾರ್ಥ ಸದಾಚಾರಿ ರಾಜಕಾರಣಿಯಪ್ಪ
ನಿನ್ನ ಚಿಂತನೆಯೆಲ್ಲ ದೇಶದ ಭವಿಷ್ಯವಪ್ಪ
ನಿಸ್ವಾರ್ಥ ಸೇವೆಯ ಮಾಡಿದೆಯಪ್ಪ
ಸಾರ್ಥಕ ಭಾರತ ಸ್ಕೌಟ್‌ಗೈಡ್ ಆಗಿದ್ದೆಯಪ್ಪ.

ಮುಗಿಯದು ನಿನ್ನಯ ಗುಣಗಾನ
ದಣಿಯದು ನೋಡಿ ತಣಿಯದು ನಿನ್ನ ಕಾರ್ಯವಿಧಾನ
ಕಾಯಕದಿ ಕೈಲಾಸವನು ಕಂಡ ಕರ್ಮಯೋಗಿ
ನೀನಿರುವೆ ನಮಗೆಲ್ಲ ನಿತ್ಯ ಜ್ಯೋತಿಯಾಗಿ!

## ಬಸವಣ್ಣನ ವಚನ

**ಇವನಾರವ, ಇವನಾರವ, ಇವನಾರವ ನೆಂದೆನಿಸದಿರಯ್ಯಾ**
**ಇವನಮ್ಮವ, ಇವನಮ್ಮನ, ಇವನಮ್ಮನ ನೆಂದೆನಿಸಯ್ಯಾ**
**ಕೂಡಲಸಂಗಮದೇವಾ**
**ನಿಮ್ಮ ಮನೆಯ ಮಗನೆಂದೆನಿಸಯ್ಯಾ.**

# ಕೊಂಡಜ್ಜಿ ಬಸಪ್ಪರವರನ್ನು ನಾನು ಕಂಡಂತೆ.....



**ಪಿ.ಜಿ.ಆರ್. ಸಿಂಧ್ಯ**
ರಾಜ್ಯ ಮುಖ್ಯ ಆಯುಕ್ತರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

**19**66ರಲ್ಲಿ ನಾನು ನನ್ನ ಸ್ವಗ್ರಾಮದಲ್ಲಿ ಪ್ರೌಢ ಶಿಕ್ಷಣವನ್ನು ಮುಗಿಸಿ, ಪಿ.ಯು.ಸಿ. ವ್ಯಾಸಂಗಕ್ಕಾಗಿ ಬೆಂಗಳೂರಿನ ನ್ಯಾಷನಲ್ ಕಾಲೇಜಿಗೆ ಸೇರಿದೆ. ಕಾಲೇಜಿನ ಹಾಸ್ಟೆಲ್‌ನಲ್ಲಿಯೇ ನನ್ನ ವಾಸ್ತವ್ಯ. ಆಗ ನನ್ನ ಕಾಲೇಜಿನ ಹಾಗೂ ಹಾಸ್ಟೆಲ್‌ನ ಸಹಪಾಠಿಯಾಗಿದ್ದವನು ಕೆ.ಬಿ. ವಿಜಯಕುಮಾರ್. ವಿಜಯಕುಮಾರ್ ಮತ್ತು ನಾನು ಆತ್ಮೀಯ ಗೆಳೆಯರಾಗಿದ್ದೆವು. ಅವನು 5-6 ತಿಂಗಳಿಗೊಮ್ಮೆ ಅವರ ತಂದೆಯನ್ನು ಭೇಟಿ ಮಾಡುವಾಗ ನನ್ನನ್ನೂ ಜೊತೆಗೆ ಕರೆದೊಯ್ಯುತ್ತಿದ್ದರು. ಅವರ ತಂದೆಯೇ ಶ್ರೀ ಕೊಂಡಜ್ಜಿ ಬಸಪ್ಪರವರು. ಶ್ರೀ ಬಸಪ್ಪರವರು ಆಗ ಈ ನಾಡುಕಂಡ ಧೀಮಂತ ರಾಜಕಾರಣಿ ಎಸ್. ನಿಜಲಿಂಗಪ್ಪರವರ ಮಂತ್ರಿ ಮಂತಲದಲ್ಲಿ ಸಚಿವ ರಾಗಿದ್ದರು. ನಾನು ಅವರನ್ನು ಭೇಟಿ ಮಾಡಿದಾಗಲೆಲ್ಲ ಅವರ ನಡೆ-ನುಡಿಗಳು ನನ್ನಲ್ಲಿ ಸ್ಫೂರ್ತಿ ತುಂಬುತ್ತಿದ್ದವು. ಸುರದ್ರೂಪಿ ಬಸಪ್ಪನವರು ಗಾಂಧಿವಾದಿಯಾಗಿದ್ದವರು. ಹಸನ್ಮುಖಿ. ಸದಾ ಸ್ವಚ್ಛವಾದ ಖಾದಿ ಉಡುಪನ್ನು ಧರಿಸುತ್ತಿದ್ದರು. ಸರಳತೆ ಅವರಲ್ಲಿ ಮೈಗೂಡಿತ್ತು. ಅಷ್ಟೇ ಗಾಂಭೀರ್ಯತೆಯೂ ಇತ್ತು. ಸಸ್ಯಹಾರಿಯಾಗಿದ್ದ ಶ್ರೀಯುತರು ಜೊತೆಗೆ ಮಿತ ಆಹಾರಿಯೂ ಆಗಿದ್ದರು. ಶಿಸ್ತಿನ ಸಿಪಾಯಿಯಂತಿದ್ದರು. ಅವರಲ್ಲಿ ಭಾಷೆಯ ಮೇಲೆ ಹಿಡಿತ ಇತ್ತು. ಕನ್ನಡ ಮತ್ತು ಇಂಗ್ಲಿಷನ್ನು ನಿರರ್ಗಳವಾಗಿ ಮಾತನಾಡುತ್ತಿದ್ದರು. ನಾನು ಭೇಟಿ ಮಾಡಿದ ಬಹುತೇಕ ಸಂದರ್ಭಗಳಲ್ಲಿ, ಸಭೆ ಸಮಾರಂಭಗಳು, ಸಂದರ್ಶಕರು ಇಲ್ಲದಿದ್ದಾಗ ಸಮಯ ವ್ಯರ್ಥ ಮಾಡದೆ ಪುಸ್ತಕಗಳನ್ನು ದಿನಪತ್ರಿಕೆಗಳನ್ನು ಓದುತ್ತಾ ಕುಳಿತಿರುತ್ತಿದ್ದ ಬಸಪ್ಪರವರು ಇಂದಿಗೂ ನನ್ನ ಕಣ್ಣ ಮುಂದೆ ಇದ್ದಾರೆ. ನಾನು ನನ್ನ ರಾಜಕೀಯ ಜೀವನದಲ್ಲಿ ಶಿಸ್ತು, ಪ್ರಾಮಾಣಿಕತೆ, ಬದ್ಧತೆ ಹಾಗೂ ಶ್ರಮವನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸುವ ನಿಟ್ಟಿನಲ್ಲಿ ಪ್ರೇರಣೆಯಾಗಿರುವ ಕೆಲವೇ ವ್ಯಕ್ತಿಗಳಲ್ಲಿ ಶ್ರೀ ಬಸಪ್ಪರವರೂ ಒಬ್ಬರು.

ನಂತರ 70ರ ದಶಕದಲ್ಲಿ ಬೆಂಗಳೂರಿನ ಆರ್.ವಿ. ಇಂಜಿನಿಯರಿಂಗ್ ಕಾಲೇಜಿನಲ್ಲಿ ನನ್ನ ಇಂಜಿನಿಯರಿಂಗ್ ವ್ಯಾಸಂಗ ಪ್ರಾರಂಭವಾಯಿತು. ಕಾಕತಾಳಿಯವಾದರೂ ಇದು ಸತ್ಯ. ಆಗ ನನ್ನ ಸಹಪಾಠಿ ಮತ್ತು ಆತ್ಮೀಯ ಗೆಳೆಯನಾಗಿದ್ದವನು, ಬಸಪ್ಪರವರ ಮತ್ತೊಬ್ಬ ಮಗ, ರವಿ ಬಿ. ಕೊಂಡಜ್ಜಿ. ಆಗಲೂ ಬಸಪ್ಪರವರು ಕೇಂದ್ರ ಸರ್ಕಾರದ ಸಚಿವರಾಗಿದ್ದರು. ಆಗಿಂದಾಗ್ಗೆ ಅವರನ್ನು ಭೇಟಿ ಮಾಡುವ ಸದವಕಾಶ ಆಗಲೂ ಮುಂದುವರೆಯಿತು.

1977ರಲ್ಲಿ ದೇಶದಲ್ಲಿ ತುರ್ತು ಪರಿಸ್ಥಿತಿಯನ್ನು ಹೇರಿದ ಸಂದರ್ಭ. ನಾನು ಮೀಸಾ ಬಂಧಿಯಾಗಿ 20 ತಿಂಗಳ ಕಾಲ ಸೆರೆಮನೆವಾಸ ಅನುಭವಿಸಿದೆ. ಅಲ್ಲಿಯೂ ನನಗೆ ಅಟಲ್ ಬಿಹಾರಿ ವಾಜಪೇಯಿ, ಎಲ್.ಕೆ. ಅಡ್ವಾನಿ, ರಾಮಕೃಷ್ಣ ಹೆಗ್ಗಡೆ, ಹೆಚ್.ಡಿ. ದೇವೆಗೌಡರಂತಹ ನಾಯಕರು ನನಗೆ ಸ್ಫೂರ್ತಿಯಾಗಿದ್ದರು. ನಾವೆಲ್ಲರೂ ಸೆರೆಮನೆವಾಸದಿಂದ ಬಿಡುಗಡೆಗೊಂಡಾಗ ಜನತಾ ಪಕ್ಷ ಉದಯವಾಗಿತ್ತು. ಇಂದಿರಾ ಗಾಂಧಿಯವರ ಕೇಂದ್ರ ಸಚಿವ ಸಂಪುಟದಲ್ಲಿ ಸಚಿವರಾಗಿದ್ದ ಬಸಪ್ಪರವರು, ಎರಡನೆ ಬಾರಿಗೆ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ದಾವಣಗೆರೆ ಲೋಕಸಭಾ ಕ್ಷೇತ್ರದಿಂದ ಪುನರಾಯ್ಕೆಗೊಂಡು, ಆ ನಂತರ ಬಾಬು ಜಗಜೀನರಾಂರವರ ನಿಕಟ ಒಡನಾಟದಿಂದ ಜನತಾ ಪಕ್ಷವನ್ನು ಸೇರಿದ್ದರು.

1978ರಲ್ಲಿ ದೇಶವು ಹಿಂದೆಂದೂ ಕಾಣದಂತಹ ಮುಂದೆಯೂ ಕಾಣಲು ಸಾಧ್ಯವಾಗದಂತ ಉಪಚುನಾವಣೆಯೊಂದನ್ನು ಎದುರಿಸಬೇಕಾದ ಅನಿವಾರ್ಯತೆ ಇತ್ತು. ಅದುವೇ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದ ಉಪಚುನಾವಣೆ. ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಹುರಿಯಾಳಾಗಿದ್ದ ದಿವಂಗತ ಇಂದಿರಾ ಗಾಂಧಿಯವರ ವಿರುದ್ಧವಾಗಿ ಕೆಲಸ ಮಾಡುವ ಸಂದರ್ಭ. ನಮ್ಮ ಪಕ್ಷದ ದಿಗ್ಗಜರಾಗಿದ್ದ ರಾಮಕೃಷ್ಣ ಹೆಗಡೆ, ದೇವೆಗೌಡ, ಮಲ್ಲಿಕಾರ್ಜುನ ಖರ್ಗೆ, ಕಾಗೋಡುತಿಮ್ಮಪ್ಪ, ಜೆ.ಹೆಚ್. ಪಟೇಲ್‌ರಂತಹ ಗಟಾನುಗಟಿ ನಾಯಕರೆಲ್ಲ ಚುನಾವಣಾ ಪ್ರಚಾರದ ಕಾರ್ಯದಲ್ಲಿ ತೊಡಗಿದ್ದರೆ, ಚುನಾವಣಾ ಕಛೇರಿಯ ಉಸ್ತುವಾರಿಯನ್ನು ನೋಡಿಕೊಳ್ಳುವ ಬಹುಮುಖ್ಯವಾದ ಹೊಣೆಗಾರಿಕೆಯನ್ನು ನಮ್ಮ ಪಕ್ಷದ ಅಧ್ಯಕ್ಷರಾಗಿದ್ದ ದೇವೆಗೌಡರವರು ಶಿಸ್ತುಬದ್ಧ ನಾಯಕ ಬಸಪ್ಪರವರಿಗೆ

ವಹಿಸಿದರು. ಇವರೊಂದಿಗೆ ಕೇಂದ್ರ ಸಚಿವರಾಗಿದ್ದ ಶ್ರೀ ಎಸ್.ಡಿ. ಪಾಟೀಲ್ ಮತ್ತು ಎಸ್. ವೆಂಕಟರಾಮ್‌ರವರೂ ಸೇರಿದ್ದರು ಆಗಲೂ ನಾನು ಬಸಪ್ಪರವರ ಕೈಕೆಳಗೆ 3 ತಿಂಗಳುಗಳ ಕಾಲ ಅವರ ಸಹಾಯಕನಾಗಿ ಕೆಲಸ ಮಾಡುವ ಜವಾಬ್ದಾರಿಯುತ ಅವಕಾಶವನ್ನು ಪಡೆದೆ. ಆಗೆಲ್ಲಾ ಚುನಾವಣೆ ಮುಗಿದ ಒಂದು ದಿನದ ನಂತರ ಎಣಿಕೆ ನಡೆಯುತ್ತಿತ್ತು. ನಮ್ಮ ಪಕ್ಷದ ಚುನಾವಣಾ ಕಛೇರಿ ಉಸ್ತುವಾರಿ ವಹಿಸಿದ್ದ ಬಸಪ್ಪರವರು ಚುನಾವಣೆ ಮುಗಿದ ಮಾರನೆ ದಿನವೇ ಚುನಾವಣೆ ಖರ್ಚು-ವೆಚ್ಚಗಳನ್ನು ತಯಾರಿಸಿ, ಉಳಿದಿದ್ದ ಹಣವನ್ನು ಕೂಡಲೇ ಪಕ್ಷದ ಅಧ್ಯಕ್ಷರಿಗೆ ಹಿಂದಿರುಗಿಸಬೇಕೆಂದು ನನಗೆ ಇನ್ನಿಲ್ಲದ ಹಿಂಸೆ ಕೊಟ್ಟರು. ಪಕ್ಷದ ಅಧ್ಯಕ್ಷರಿಗೆ ಲೆಕ್ಕ ಪತ್ರಗಳನ್ನು, ಉಳಿಕೆ ಹಣವನ್ನು ತಲುಪಿಸುವವರೆಗೂ ಬಿಡಲಿಲ್ಲ. ಆಗಲೇ ನಾನು ಇವರ ನಿಷ್ಠೆ, ಪ್ರಾಮಾಣಿಕತೆಗೆ ಮಾರು ಹೋದೆ.

ಶ್ರೀ ಬಸಪ್ಪರವರ ಕುಟುಂಬಕ್ಕೂ ನನಗೂ ಅವಿನಾಭಾವ ಸಂಬಂಧ ಇದೆ. ಅವರ ಮನೆಯ ಸದಸ್ಯರಲ್ಲಿ ನಾನೂ ಒಬ್ಬನಾಗಿ ಹೋಗಿದ್ದೇನೆ. ಅವರ ಮಕ್ಕಳೆಲ್ಲರೊಂದಿಗೂ ನನ್ನ ಸ್ನೇಹ-ಬಾಂಧವ್ಯ ಮುಂದುವರೆದುಕೊಂಡೇ ಬಂದಿದೆ. 1965-66ರಲ್ಲಿ ವಿಜಯಕುಮಾರ್ ಪಿ.ಯು.ಸಿ.ಯಲ್ಲಿ ನನ್ನ ಸಹಪಾಠಿ. 1971 ರಿಂದ ಇಂಜಿನಿಯರಿಂಗ್‌ನಲ್ಲಿ ರವಿ ಕೊಂಡಜ್ಜಿ ನನ್ನ ಸಹಪಾಠಿ. 1985 ರಿಂದ ನಾನು ನನ್ನನ್ನು ಸ್ಕೌಟ್ಸ್ / ಗೈಡ್ಸ್ ಸಂಸ್ಥೆಗೆ ತೊಡಗಿಸಿಕೊಂಡ ಕೆ.ಬಿ. ಷಣ್ಮುಖಪ್ಪರವರು ನನ್ನ ಮಾರ್ಗದರ್ಶಿಯಾಗಿದ್ದಾರೆ. ಇಂದಿಗೂ ನನಗೆ ಸಹಕಾರ ಮಾರ್ಗದರ್ಶನ ನೀಡುತ್ತಾ ಬಂದಿದ್ದಾರೆ. ಇನ್ನು ನನ್ನ ರಾಜಕೀಯದ ಸ್ಥಿತ್ಯಂತರಗಳಲ್ಲಿ ಮೋಹನ್ ಕೊಂಡಜ್ಜಿಯವರು ನನಗೆ ಮಾನಸಿಕ ಸ್ಥೈರ್ಯ ತುಂಬುತ್ತಾ ನನ್ನ ರಾಜಕೀಯ ಬೆಳವಣಿಗೆ ಸಹಕಾರಿಯಾಗುತ್ತಿದ್ದಾರೆ. ಹೀಗೆ 1965 ರಿಂದಲೂ ಈ ಕುಟುಂಬದೊಂದಿಗೆ ನನ್ನ ಸಂಬಂಧ ಎಲ್ಲ ಹಂತಗಳಲ್ಲಿಯೂ ಗಟ್ಟಿಗೊಂಡಿದೆ. ಕೊನೆಗಾಲದವರೆಗೂ ಈ ಬಾಂಧವ್ಯ ಹೀಗೆಯೇ ಮುಂದುವರೆಯಲೆಂಬ ಆಶಯ ನನ್ನದು.

ಶ್ರೀ ಬಸಪ್ಪರವರದು ತುಂಬು ಕುಟುಂಬ. ತಮ್ಮ ರಾಜಕೀಯ ಜೀವನದಲ್ಲಿ ಯಾವುದೇ ಕಪ್ಪುಚುಕ್ಕೆಯನ್ನು ಅಂಟಿಸಿಕೊಂಡವರಲ್ಲ. ತಮ್ಮ 7 ಜನ ಗಂಡು ಮಕ್ಕಳು ಹಾಗೂ ಒಬ್ಬಳೇ ಮಗಳು ಮಂಜುಳಾರನ್ನು ಸಭ್ಯತೆಯಿಂದ ಬೆಳೆಸಿ, ಉತ್ತಮ ಶಿಕ್ಷಣ ಕೊಟ್ಟಿದ್ದಾರೆ ಹೊರತು, ಅವರಿಗೆ ಯಾವುದೇ ರೀತಿಯ ಆಸ್ತಿಪಾಸ್ತಿಗಳನ್ನು ಮಾಡಲಿಲ್ಲ. ರಾಜಕಾರಣದಲ್ಲಿ ತಮ್ಮ ಕುಟುಂಬದವರನ್ನು ಹತ್ತಿರ ಬಿಟ್ಟುಕೊಂಡವರಲ್ಲ. ರಾಜಕೀಯವಾಗಿ ತಮಗೆ ಸಿಕ್ಕಿದ್ದ ಎಲ್ಲ ಅಧಿಕಾರ ಸ್ಥಾನಗಳನ್ನು ಮಕ್ಕಳಿಗೆ ಅಥವಾ ಕುಟುಂಬಕ್ಕೆ ದುರುಪಯೋಗಪಡಿಸಿಕೊಂಡವರಲ್ಲ.

ಇದೆಲ್ಲಾ ಅವರ ರಾಜಕೀಯ ಜೀವನದ ಅದ್ಭುತಗಳಾದರೆ, ಅವರ ಜೀವನದ ಮತ್ತೊಂದು ಮುಖವೇ ಶಿಸ್ತಿಗೆ ಹೆಸರಾಗಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ. ಈ ಸಂಸ್ಥೆ ಬಸಪ್ಪರವರಿಗೆ ಹೇಳಿ ಮಾಡಿಸಿದಂತಿತ್ತು. ಮಕ್ಕಳ ಬಗ್ಗೆ ಅಪಾರ ಪ್ರೀತಿ-ಕಾಳಜಿ ಹೊಂದಿದ್ದ ಬಸಪ್ಪರವರು ಸ್ಕೌಟ್ / ಗೈಡ್ ಚಳವಳಿಯನ್ನು ತಮ್ಮ ಉಸಿರಾಗಿಸಿಕೊಂಡಿದ್ದರು. ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಇಂದಿಗೂ ನಮ್ಮೊಂದಿಗಿರುವ ಬಸಪ್ಪರವರ ಸಮಕಾಲೀನ ನಾಯಕರು ಬಸಪ್ಪರವರಿಗೆ ಈ ಚಳವಳಿಯ ಬಗ್ಗೆ ಇದ್ದ ಬದ್ಧತೆ ಮತ್ತು ಕಳಕಳಿಯನ್ನು ತಿಳಿಸುವಾಗ ಮೈ ನವಿರೇಳುತ್ತದೆ. ಅವರೆಲ್ಲರೂ ಹೇಳುವಂತೆ, ಬಸಪ್ಪರವರು ಸಚಿವರಾಗಿದ್ದಾಗಲೂ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಸಂಬಂಧಿಸಿದ ಸಭೆ, ಸಮಾರಂಭಗಳಲ್ಲಿ ಸ್ಕೌಟ್ ಸಮವಸ್ತ್ರದಲ್ಲಿ ತಪ್ಪದೆ ಹಾಜರಾಗುತ್ತಿದ್ದರು. ಎಷ್ಟೋ ಸಂದರ್ಭಗಳಲ್ಲಿ ಸಂಸತ್ ಅಧಿವೇಶನ ಅಥವಾ ಮಂತ್ರಿಗಳ ಸಭೆಗಳನ್ನು ಮುಗಿಸಿ ನೇರವಾಗಿ ಸಮಯಕ್ಕೆ ಸರಿಯಾಗಿ ಈ ಸಭೆಗಳಲ್ಲಿ ಭಾಗವಹಿಸುತ್ತಿದ್ದರು ಎಂಬುದನ್ನು ತಿಳಿದಾಗ ಅಚ್ಚರಿ ಎನಿಸುತ್ತದೆ. ಇಂದು ಕರ್ನಾಟಕದಲ್ಲಿ ಸ್ಕೌಟ್ / ಗೈಡ್ ಸಂಸ್ಥೆಗೆ ಸುಭದ್ರವಾದ ಆಸ್ತಿಪಾಸ್ತಿಗಳಿದ್ದರೆ ಅದಕ್ಕೆ ರಾಜ್ಯ ಪ್ರಧಾನ ಆಯುಕ್ತರಾಗಿದ್ದ ಶ್ರೀ ಬಸಪ್ಪರವರೇ ಕಾರಣ. ಜನಮಾನಸದಲ್ಲಿ ಅಚ್ಚಳಿಯದೆ ಉಳಿಯುವಂತಹ, ಸ್ಕೌಟ್ ಚಳವಳಿಗೆ ಭದ್ರ ಬುನಾದಿಯನ್ನು ಹಾಕುವಂತಹ ಅದೆಷ್ಟೋ ಕ್ರಾಂತಿಕಾರಿ ಕೆಲಸಗಳನ್ನು ಮಾಡಿದ್ದಾರೆ. ಅವರು ನಮ್ಮನ್ನಗಲಿ 35 ವರ್ಷಗಳಾದರೂ ದೇಶದಾದ್ಯಂತ ಅದರಲ್ಲೂ ಸ್ಕೌಟ್ / ಗೈಡ್ ಚಳವಳಿಯಲ್ಲಿ ಇಂದಿಗೂ ಅವರ ಹೆಸರು ಚಿರಸ್ಥಾಯಿಯಾಗಿ ಉಳಿದಿರುವುದೇ ಇದಕ್ಕೆ ಸಾಕ್ಷಿ.

ಇಂತಹ ಮಹಾನ್ ಚೇತನ ಕಟ್ಟಿ ಬೆಳೆಸಿದ ಈ ಸಂಸ್ಥೆಗೆ ನಾನು ರಾಜ್ಯ ಮುಖ್ಯ ಆಯುಕ್ತನಾಗಿರುವುದು ನನ್ನ ಸುದೈವವೇ ಸರಿ. ಅದರಲ್ಲೂ ನನ್ನ ಅವಧಿಯಲ್ಲಿಯೇ ಇವರ ಶತಮಾನೋತ್ಸವವನ್ನು ಆಚರಿಸುವ ಸದವಕಾಶ ಸಿಕ್ಕಿರುವುದು ನನ್ನ ಪುಣ್ಯವೆಂದೇ ಭಾವಿಸಿದ್ದೇನೆ.

# ಕೊಂಡಜ್ಜಿ: ವ್ಯಕ್ತಿತ್ವ ಮತ್ತು ಜೀವನದೃಷ್ಟಿ

**ಕೆ.ಸಿ. ಶಿವಪ್ಪ**
ಉಪನಿರ್ದೇಶಕರು, ಪ್ರಕಟಣೆಗಳು
ಬೆಂಗಳೂರು ವಿಶ್ವವಿದ್ಯಾಲಯ

'**ಕೊಂ**ಡಜ್ಜಿ'. ಇದು ಕರ್ನಾಟಕ ರಾಜ್ಯದ ಹರಿಹರ ತಾಲ್ಲೂಕಿನಲ್ಲಿರುವ ಒಂದು ಗ್ರಾಮದ ಹೆಸರು. ಆದರೆ ಇಂದು ಕೊಂಡಜ್ಜಿ ಎಂದರೆ ಎಲ್ಲರಿಗೆ ತಿಳಿದಿರುವುದು ಕೊಂಡಜ್ಜಿ ಬಸಪ್ಪ ಅವರ ಹೆಸರು. ಹೀಗೆ 'ಕೊಂಡಜ್ಜಿ' ಹಾಗೂ 'ಬಸಪ್ಪ' –ಇವು ಪೂರಕವಷ್ಟೇ ಅಲ್ಲ, ಅನ್ವರ್ಥನಾಮವಾಗಿವೆ.

### 1915ರ ಡಿಸೆಂಬರ್ 11

ಕೊಂಡಜ್ಜಿ ಬಸಪ್ಪನವರ ಜನ್ಮದಿನ– ಶಾಲೆಯ ರಿಜಿಸ್ಟರ್ ಪ್ರಕಾರ. ಆದರೆ ಇದನ್ನು ಖಚಿತವಾಗಿ ಹೇಳುವಂತಿಲ್ಲ. ಆರು ತಿಂಗಳಷ್ಟು ಹೆಚ್ಚು–ಕಡಿಮೆ ಇರಲೂ ಸಾಧ್ಯ. 1917–18ರಲ್ಲಿ ಜಿಲ್ಲೆಯಲ್ಲಿ ಗುಡ್ಡಮ್ಮನ ಬೇನೆ ಕಾಣಿಸಿಕೊಂಡಿತ್ತಂತೆ. ಅದಕ್ಕಿಂತ ಮೂರು ವರ್ಷಗಳ ಹಿಂದೆ ಬಸಪ್ಪನವರು ಹುಟ್ಟಿದ್ದು ಎಂದು ಲೆಕ್ಕ, ಗುರುವಾರದ ದಿನ ಹುಟ್ಟಿದರೆಂದು ಬಸಪ್ಪನವರ ತಾಯಿ ಹೇಳಿದ್ದರಂತೆ. ಅಂತೂ ನಿಶ್ಚಿತವಾದ ದಿನಾಂಕ ತಿಳಿದಿಲ್ಲ.

ಬಸಪ್ಪನವರ ಅಜ್ಜ– ತಂದೆಯ ತಂದೆ– ಭೀಮಪ್ಪ ಕೆಂಚನಹಳ್ಳಿಯಿಂದ ಕೊಂಡಜ್ಜಿಗೆ ಬಂದು ನೆಲೆಸಿದರು. ಅದರಿಂದಾಗಿ ಬಸಪ್ಪನವರ ಮನೆಯವರನ್ನು ಈಗಲೂ 'ಕೆಂಚನಹಳ್ಳಿ'ಯವರೆಂದು ಕರೆಯುತ್ತಾರೆ.

ತಂದೆ ನಿಂಗಪ್ಪ, ತಾಯಿ ಹಾಲಮ್ಮ– ಇಬ್ಬರೂ ಓದಿದವರಲ್ಲ. ತಾಯಿ ಹಾಲಮ್ಮ ಕೊಂಡಜ್ಜಿಗೆ ನಾಲ್ಕು ಮೈಲಿ ದೂರದಲ್ಲಿರುವ ಕಕ್ಕರಗೊಳ್ಳ ಗ್ರಾಮದವರು. ಅಜ್ಜ ಭೀಮಪ್ಪನವರಿಗೆ ಒಟ್ಟು 8 ಮಕ್ಕಳು– 5 ಗಂಡು ಮತ್ತು 3 ಹೆಣ್ಣು. ಇವರಲ್ಲಿ ನಿಂಗಪ್ಪನವರು ಜ್ಯೇಷ್ಠ ಪುತ್ರರು. ನಿಂಗಪ್ಪನವರಿಗೆ 5 ಮಂದಿ ಮಕ್ಕಳು– ಮುನಿಯಪ್ಪ, ಮಲ್ಲಿಕಾರ್ಜುನಪ್ಪ, ಬಸಪ್ಪ, ವಿರೂಪಾಕ್ಷಪ್ಪ ಮತ್ತು ಸಿದ್ದಲಿಂಗಮ್ಮ. ಇದಿಷ್ಟು ಬಸಪ್ಪನವರ ವಂಶದ ಹಿನ್ನೆಲೆ.

ಬಸಪ್ಪ ಅವರ ಪ್ರಾಥಮಿಕ ಶಿಕ್ಷಣ (ಕನ್ನಡ ಲೋಯರ್ ಸೆಕೆಂಡರಿ) ನಡೆದದ್ದು ಕೊಂಡಜ್ಜಿಯಲ್ಲಿ. ಅನಂತರ ಮಲೇಬೆನ್ನೂರಿನಲ್ಲಿ ಇಂಗ್ಲೀಷ್ ಲೋಯರ್ ಸೆಕೆಂಡರಿ (1931) ಶಿಕ್ಷಣ. ಕಂದಾಯ ಕೊಡುವುದಕ್ಕೂ ಆಗದ ಸ್ಥಿತಿಯಲ್ಲಿದ್ದ ಕುಟುಂಬ. ಹೀಗಾಗಿ ಶಿಕ್ಷಣ ಮುಂದುವರಿಸುವಂತಿರಲಿಲ್ಲವಂತೆ. ಈಚಗಟ್ಟದ ಬಸಪ್ಪ ಮತ್ತು ಹನುಮನಹಳ್ಳಿಯ ಪಟೇಲ್ ಮಹದೇವಪ್ಪ ಅವರ ಸಹಾಯ ದೊರಕಿತು. ಬಸಪ್ಪನವರು ದಾವಣಗೆರೆಯ ಸರ್ಕಾರಿ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿ, 1934ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆದರೆ ಮತ್ತೆ ಆರ್ಥಿಕ ತೊಂದರೆಯ ಸರಮಾಲೆ. ಓದಿಗೆ ಶರಣು ಹೊಡೆದು ಗುಮಾಸ್ತರಾಗುವ ಬಯಕೆ. ಡಾಕ್ಟರ್ ಮಹಂತಯ್ಯ ಅವರ ಸಹಕಾರ, ಬಲವಂತದ ಫಲವಾಗಿ ಕಾಲೇಜು ಸೇರುವ ಸುಯೋಗ ಬಸಪ್ಪನವರ ಪಾಲಿಗೆ ಬಂತು.

ಆಗಿನ ಬಸಪ್ಪನವರ ವೇಷಭೂಷಣ ಏನು ಗೊತ್ತೆ? ಪಂಚೆ, ಷರಟು, ಕೋಟು ಮತ್ತು ಟೋಪಿ. "ಖರ್ಚು ಮಾಡೋಕೆ ದುಡ್ಡೇ ಇರಲಿಲ್ಲ. ಇನ್ನು ದುಂದುಗಾರಿಕೆಯ ಮಾತೆಲ್ಲಿ?" ಬಸಪ್ಪನವರು 'ಕ್ರಾಪ್' ಬಿಟ್ಟಿದ್ದು ಕಾಲೇಜಿಗೆ ಬಂದ ಮೇಲೆಯೇ!

ಆಗ ಇಡೀ ರಾಜ್ಯದಲ್ಲಿ ಇದ್ದ ಕಾಲೇಜುಗಳು ಕೇವಲ ಎರಡು. ಒಂದು ಮೈಸೂರು, ಇನ್ನೊಂದು ಬೆಂಗಳೂರಿನಲ್ಲಿ. ಬಸಪ್ಪನವರು ಬೆಂಗಳೂರಿನ ಇಂಟರ್‌ಮೀಡಿಯಟ್ ಕಾಲೇಜಿಗೆ ಸೇರಿದರು. ತೋಟದಪ್ಪ ಛತ್ರದಲ್ಲಿ ವಾಸ. ಊಟ ಮಾಡಿದ ನಂತರ ತಾವೇ ತಟ್ಟೆ ತೊಳೆದುಕೊಳ್ಳಬೇಕೆಂಬ ನಿಯಮ. ನಂಜಪ್ಪನವರ ಮಾರ್ಗದರ್ಶನದಲ್ಲಿ ಈ ಛತ್ರ ಉತ್ತಮ ವಿದ್ಯಾರ್ಥಿ ನಿಲಯವಾಗಿತ್ತಂತೆ.

### 1936ರಲ್ಲಿ ಇಂಟರ್‌ಮೀಡಿಯಟ್

1938ರಲ್ಲಿ ಸೆಂಟ್ರಲ್ ಕಾಲೇಜಿನಿಂದ ಬಿ.ಎಸ್ಸಿ. ಪದವಿ. ಅದೇ ವರ್ಷ ಕಂದಗಲ್ ಗ್ರಾಮದ ಸರ್ವಮಂಗಳಮ್ಮ ಅವರೊಡನೆ

ಮದುವೆ. 1940ರಲ್ಲಿ ಎಲ್.ಎಲ್.ಬಿ. ಶಿಕ್ಷಣ– ಪೂನಾದ ಲಾ ಕಾಲೇಜಿನಲ್ಲಿ, ಮಾವ ಪಟೇಲ್ ಶ್ರೀ ಚನ್ನಬಸಪ್ಪನವರ ಸಹಾಯದಿಂದ. ಯಾವ ಪರೀಕ್ಷೆಯಲ್ಲೂ 'ಫೇಲಾ'ಗದ ಬಸಪ್ಪನವರು ಹೇಳಿಕೊಳ್ಳುವಂತಹ ಅಸಾಧಾರಣ ವಿದ್ಯಾರ್ಥಿಯಲ್ಲದಿದ್ದರೂ, ಉತ್ತಮ ಮಟ್ಟದ ವಿದ್ಯಾರ್ಥಿಯಾಗಿದ್ದರೆನ್ನಬಹುದು. 'ಅಸಾಧಾರಣ' ವ್ಯಕ್ತಿತ್ವ ಅರಳುವುದು ಕಾಲೇಜಿನ ಹೊರಗಿನ ಜೀವನ ಕ್ಷೇತ್ರದಲ್ಲಿ ತಾನೇ!

ಶಿವಮೊಗ್ಗದ ವಕೀಲ ಶ್ರೀ ಎಚ್. ಲಿಂಗಪ್ಪನವರ ಬಳಿ ಒಂದು ವರ್ಷಕಾಲ ತರಬೇತಿ. ಅದರಿಂದ ಕಲಿತ ಉತ್ತಮ ಪಾಠ ಎಂದರೆ: "ಸಮಯ ಪಾಲನೆ; ಕಾರ್ಯಕ್ರಮಗಳಿಗೆ ಎಂದೂ ತಡವಾಗಿ ಹೋಗದಿರುವುದು". ಬಸಪ್ಪನವರು ಇಂದಿಗೂ ಸಮಯದ ಬಗ್ಗೆ ತುಂಬ ಕಾಳಜಿ ವಹಿಸುವ ವ್ಯಕ್ತಿ. ಕಾಲಕ್ಕೆ ಸರಿಯಾಗಿ ನಿಗದಿಯಾದ ಕಾರ್ಯಗಳನ್ನು ಪೂರೈಸುವ ಮನೋಭಾವ ಉಳ್ಳವರು. ಚಳಿ ಇರಲಿ, ಸೆಕೆ ಇರಲಿ– ಬೆಂಗಳೂರಿನಲ್ಲಿರಲಿ, ದೆಹಲಿಯಲ್ಲಿರಲಿ– ಬೆಳಿಗ್ಗೆ ಐದು ಗಂಟೆಯ ಹೊತ್ತಿಗೆ ದಿನ ಪ್ರಾರಂಭವಾಗುತ್ತದೆ. ಬಸಪ್ಪ ಅವರ ಸಮಯಪ್ರಜ್ಞೆ ಬಹುಜನರ ಮೆಚ್ಚುಗೆಗೆ ಪಾತ್ರವಾಗಿದ್ದರೆ, ಅದು ಆಶ್ಚರ್ಯದ ಸಂಗತಿಯಲ್ಲ.

**1942 ಜನವರಿ**

ದಾವಣಗೆರೆಯಲ್ಲಿ ಸ್ವತಂತ್ರವಾಗಿ ವಕೀಲ ವೃತ್ತಿಯನ್ನು ಪ್ರಾರಂಭಿಸಿದರು ಕೊಂಡಜ್ಜಿ. ಒಂದೆರಡು ವರ್ಷ ಸಾಧಾರಣವಾದ ಪ್ರಾಕ್ಟೀಸು. ವಿಚಿತ್ರ ಸನ್ನಿವೇಶಗಳ ಒತ್ತಡ; ಕೊಂಡಜ್ಜಿ ರಾಜಕೀಯ ರಂಗವನ್ನು ಪ್ರವೇಶಿಸಿದರು. 1946ರಲ್ಲಿ ಚಿತ್ರದುರ್ಗ ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿ ಚುನಾಯಿತರಾದರು. ಆಗಿನ ಸೇವಾವಧಿಯಲ್ಲಿ ನೆರವಾದ ಜಿಲ್ಲಾಧಿಕಾರಿ ಶ್ರೀ ಎ.ಸಿ. ನಿರ್ವಾಣೇಗೌಡರನ್ನು ಕೊಂಡಜ್ಜಿ ಈಗಲೂ ಸ್ಮರಿಸಿಕೊಳ್ಳುತ್ತಾರೆ. ಯಾವುದೇ ಸ್ಥಾನಮಾನ ಸೇವೆಗೊಂದು ಅವಕಾಶ ಎನ್ನುವ ಪ್ರವೃತ್ತಿಯನ್ನು ರೂಢಿಸಿಕೊಂಡಿರುವ ಕೊಂಡಜ್ಜಿ ಜಿಲ್ಲೆಯ ಸಾಮಾಜಿಕ ಸೇವೆಗೆ ತಮ್ಮನ್ನೇ ಮುಡುಪಾಗಿಟ್ಟುಕೊಂಡರು. ಪ್ರತಿ ತಾಲ್ಲೂಕಿನಲ್ಲಿ ಪ್ರೌಢಶಾಲೆ, ಆಸ್ಪತ್ರೆಗಳು; ಚಿತ್ರದುರ್ಗ, ದಾವಣಗೆರೆಯಲ್ಲಿ ಕಾಲೇಜುಗಳು– ಇವುಗಳ ಸ್ಥಾಪನೆ ಬಗ್ಗೆ ಕೊಂಡಜ್ಜಿ ಶ್ರಮಿಸಿದರು. ಜಿಲ್ಲೆಯಲ್ಲಿ ಕ್ಷಾಮ ತಲೆದೋರಿದಾಗ ಹಗಲಿರುಳೆನ್ನದೆ ದುಡಿದರು. ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾದರು. ಸರ್ಕಾರದ 'ಸೇವಾ ಪದಕ' ಸಹ ದೊರಕಿತು. ಅದಕ್ಕಿಂತ ಮಿಗಿಲಾಗಿ ಜನಮನದ ಅಂತಃಕರಣವನ್ನು ಗೆದ್ದರು. ಈ ಪ್ರೀತಿ–ಗೌರವ ಇಂದಿಗೂ ಕೊಂಡಜ್ಜಿ ಅವರ ಪಾಲಿಗೆ ಚಿರನೂತನವಾಗಿದೆ.

ಕೊಂಡಜ್ಜಿ ಅವರು 1947ರಲ್ಲಿ ದಾವಣಗೆರೆ ತಾಲ್ಲೂಕಿನಿಂದ ಚಿತ್ರದುರ್ಗ ಜಿಲ್ಲಾ ಬೋರ್ಡಿಗೆ ಅವಿರೋಧವಾಗಿ ಸದಸ್ಯರಾಗಿ ಚುನಾವಣೆ. ಆದರೆ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿ ಸೋಲು. ಚಿತ್ರದುರ್ಗದಲ್ಲಿ ಮತ್ತೆ ವಕೀಲ ವೃತ್ತಿಯ ಪ್ರಾರಂಭ. ಉತ್ತಮ ವಕೀಲರೆಂದು ಹೆಸರು. ರಾಜ್ಯದ ಸೆಕೆಂಡರಿ ಶಿಕ್ಷಣ ಬೋರ್ಡಿನ ಸದಸ್ಯರಾಗಿ ನಾಮಕರಣ; ಮೈಸೂರು ವಿಶ್ವವಿದ್ಯಾನಿಲಯದ ಸಿಂಡಿಕೇಟಿನ ಸದಸ್ಯತ್ವ– 6 ವರ್ಷಗಳ ಕಾಲ; ವೈದ್ಯಕೀಯ ಹಾಗೂ ಇಂಜಿನಿಯರಿಂಗ್ ಕಾಲೇಜುಗಳ ಪ್ರವೇಶ ಸಮಿತಿಗಳ ಸದಸ್ಯರಾಗಿ ಆಯ್ಕೆ; ದಾವಣಗೆರೆಯಲ್ಲಿ ಅಧ್ಯಕ್ಷರಾಗಿ ಕಾರ್ಯ ನಿರ್ವಹಣೆ; ತರಳಬಾಳು ನಿಧಿ ಸಮಿತಿ. ಸಿರಿಗೆರೆ ಪ್ರೌಢಶಾಲೆ, ಚಿತ್ರದುರ್ಗದ ಲಂಬಾಣಿ ವಿದ್ಯಾರ್ಥಿನಿಲಯ, ವಯಸ್ಕರ ಶಿಕ್ಷಣ ಸಮಿತಿ, ಚಿತ್ರದುರ್ಗ ಜಿಲ್ಲಾ ಕೃಷಿ ಒಕ್ಕೂಟ– ಹೀಗೆ ಅನೇಕ ಸಂಘ–ಸಂಸ್ಥೆಗಳೊಡನೆ ನಿಕಟ ಬಾಂಧವ್ಯ. ಬಹುಮುಖ ಸೇವೆಗೊಂದು ಅವಕಾಶ.

1962ರ ಸಾರ್ವತ್ರಿಕ ಚುನಾವಣೆ ಕೊಂಡಜ್ಜಿ ಅವರನ್ನು ರಾಜ್ಯದ ಆಡಳಿತಕ್ಕೆ ತಂದಿತು. ವಿಧಾನಸಭಾ ಸದಸ್ಯರಾಗಿ ಕೊಂಡಜ್ಜಿ ಚುನಾಯಿತರಾದರು. ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಉಪಸಚಿವರಾಗಿ ನೇಮಕವಾದರು. ಐದು ವರ್ಷಗಳ ಕಾಲ ರಾಜ್ಯದ ಸಹಕಾರ. ಸಮಾಚಾರ ಮತ್ತು ಅಬ್ಕಾರಿ ಖಾತೆಗಳಲ್ಲಿ ಸೇವೆ ಸಲ್ಲಿಸಿದರು.

ಪಂಚಾಯುತ್ ರಾಜ್ಯದ ಸಮಿತಿಯ ಅಧ್ಯಕ್ಷರಾಗಿ ನೇಮಕಗೊಂಡ ಕೊಂಡಜ್ಜಿ ಅವರು ಈ ಅವಧಿಯಲ್ಲಿ ಉತ್ತಮ ವರದಿಯೊಂದನ್ನು ಸರ್ಕಾರಕ್ಕೆ ಸಲ್ಲಿಸಿದರು. ಈ ವರದಿ ರಾಜ್ಯ ಹಾಗೂ ದೇಶದ ನಾಯಕರ ಮೆಚ್ಚುಗೆಯನ್ನು ಪಡೆಯಿತು. ಕೈಮಗ್ಗ ಸಲಹಾ ಸಮಿತಿ, ಉಣ್ಣೆ ಮತ್ತು ಕುರಿ ಅಭಿವೃದ್ಧಿ ಸಮಿತಿ ಹಾಗೂ ರಾಜ್ಯದ ದಾಸ್ತಾನು ಕಾರ್ಪೋರೇಷನ್ನಿನ ಅಧ್ಯಕ್ಷರಾಗಿ ಸಹ ಕೊಂಡಜ್ಜಿ ಕಾರ್ಯ ನಿರ್ವಹಿಸಿದರು.

1967ರಲ್ಲಿ ಮತ್ತೆ ವಿಧಾನಸಭೆಗೆ ಚುನಾಯಿತರಾಗಿ ಬಂದರು ಕೊಂಡಜ್ಜಿ. ಆದರೆ ಮಂತ್ರಿಯಾಗಲಿಲ್ಲ. ಚಿತ್ರದುರ್ಗದಲ್ಲಿ ವಕೀಲ ವೃತ್ತಿಯನ್ನು ಮತ್ತೆ ಕೈಗೊಂಡರು. 1971ರಲ್ಲಿ ವಿಧಾನ ಸಭೆಗೆ ರಾಜೀನಾಮೆ ಇತ್ತು. ಲೋಕಸಭೆಗೆ ಸ್ಪರ್ಧಿಸಿದರು; ಚುನಾಯಿತ ರಾದರು. ಈ ಗೆಲುವು ಕೊಂಡಜ್ಜಿ ಅವರ ಜನಪ್ರಿಯತೆಯನ್ನು ನಿಚ್ಚಳವಾಗಿ ತೋರಿಸುತ್ತದೆ. ಕೇಂದ್ರ ಸರ್ಕಾರದ ಉಪಸಚಿವರಾಗಿ 1972ರ ಫೆಬ್ರವರಿಯಲ್ಲಿ ಕೊಂಡಜ್ಜಿ ಅವರು ನೇಮಕಗೊಂಡರು. 1974ರ ಅಕ್ಟೋಬರ್‌ವರೆಗೆ ಆರೋಗ್ಯ ಮತ್ತು ಕುಟುಂಬ ಯೋಜನೆ ಉಪಸಚಿವರಾಗಿ ಕಾರ್ಯ ನಿರ್ವಹಿಸಿದರು. ಅವರು ಯಾವ ಸ್ಥಾನದಲ್ಲೇ ಇರಲಿ ಆ ಸ್ಥಾನಕ್ಕೊಂದು ಘನತೆ ಬಂದಿದೆ.

**ಕೊಂಡಜ್ಜಿ ಮತ್ತು ಸ್ಕೌಟ್ ಚಳವಳಿ**

1942. ಕೊಂಡಜ್ಜಿ ದಾವಣಗೆರೆಯಲ್ಲಿ ವಕೀಲರಾಗಿದ್ದರು. ಆಗ ಅವರನ್ನು ಸ್ಕೌಟ್ ಚಳವಳಿಗೆ ಆಹ್ವಾನಿಸಿದವರು ಅಂದು ಜಿಲ್ಲೆಯ ಸಹಾಯಕ ಕಮೀಷನರ್ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ದಾವಣಗೆರೆ ಶಾಖೆಯ ಅಧ್ಯಕ್ಷರೂ ಆಗಿದ್ದ ಶ್ರೀ ಬಿ. ಬೀರಪ್ಪ ಅವರು. ಕೊಂಡಜ್ಜಿ ದಾವಣಗೆರೆ ಸ್ಕೌಟ್ಸ್–ಗೈಡ್ಸ್‌ನ ಸಹಾಯಕ ಕಮೀಷನರ್ ಆದರು; ನಂತರ ಸಹಾಯಕ ರಾಜ್ಯ ಕಮೀಷನರ್ ಆಗಿ ಶಿವಮೊಗ್ಗ, ಹಾಸನ, ಚಿಕ್ಕಮಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಕಾರ್ಯಕ್ಷೇತ್ರ ವನ್ನು ವಿಸ್ತರಿಸುವುದರಲ್ಲಿ ಸಹಾಯಕರಾದರು.

ರಾಜ್ಯದ ಉಪಸಚಿವರಾಗಿದ್ದಾಗ, ರಾಜ್ಯದ ಸ್ಕೌಟ್ಸ್–ಗೈಡ್ಸ್‌ನ ರಾಜ್ಯ ಕಾರ್ಯದರ್ಶಿಯಾದರು. ಪ್ರೊ. ಪಿ.ಶಿವಶಂಕರ್ ಅವರ ನಂತರ, ಅವರ ಸ್ಥಾನದಲ್ಲಿ ಚೀಫ್ ಕಮೀಷನರ್ ಆಗಿ ಸುಮಾರು ಒಂದು ವರ್ಷದ ಅವಧಿಗೆ ನೇಮಕವಾದರು. ಮತ್ತೆ ಅದೇ ಸ್ಥಾನಕ್ಕೆ ಚುನಾಯಿತರಾದರು. ಎರಡನೆಯ ಹಾಗೂ ಮೂರನೆಯ ಅವಧಿಗೆ ಅವಿರೋಧವಾಗಿ ಆಯ್ಕೆಯಾದರು. ಹೀಗೆ ಹನ್ನೆರಡು ವರ್ಷಗಳಿಂದ ರಾಜ್ಯದ ಚೀಫ್ ಕಮೀಷನರ್ ಆಗಿ ಕೊಂಡಜ್ಜಿ ಅವರು ಕರ್ನಾಟಕ ರಾಜ್ಯದಲ್ಲಿ ಸ್ಕೌಟ್ಸ್–ಗೈಡ್ಸ್ ಚಳವಳಿಯ ಬೆನ್ನೆಲುಬಾಗಿ ನಿಂತಿದ್ದರು.

ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯೊಡನೆ ಕೊಂಡಜ್ಜಿ ಅವರ ಬಾಂಧವ್ಯ ಕೇವಲ ಪದನಿಮಿತ್ತ ಅಲ್ಲ. ಸಂಸ್ಥೆಯ ಧ್ಯೇಯದಲ್ಲಿ ಅಚಲ ನಂಬಿಕೆಯುಳ್ಳವರು ಕೊಂಡಜ್ಜಿ. ಅವರ ಮನೋಗುಣ ಸ್ಕೌಟ್ಸ್‌ನ ಶ್ರೇಷ್ಠ ನೀತಿನಿಯಮಗಳಿಗೆ ತುಂಬ ಹೊಂದಿಕೊಂಡಿರು ವುದು ವ್ಯಕ್ತಿ–ಸಂಸ್ಥೆಯ ಒಳಿತಿಗೆ ಕಾರಣವಾಗಿದೆ ಎನ್ನಬಹುದು.

'ಸ್ಕೌಟ್ ಚಳವಳಿಯಲ್ಲಿ ನಾನು ಸಕ್ರಿಯವಾಗಿ ಪಾಲ್ಗೊಳ್ಳುವುದಕ್ಕೆ ಪ್ರೊ. ಪಿ.ಶಿವಶಂಕರ್ ಅವರ ಪ್ರೋತ್ಸಾಹವೇ ಕಾರಣ' ಎನ್ನುವ ಕೊಂಡಜ್ಜಿ ಅವರಿಗೆ. ಶಿವಶಂಕರ್ ಅವರ ಬಗ್ಗೆ ಅತ್ಯಂತ ಗೌರವ–ಅಭಿಮಾನವಿತ್ತು. 'ಶಿವಶಂಕರ್ ಅವರ ಸಾತ್ವಿಕ ಜೀವನ. ಅವರ ಚಿಂತನಧಾರೆ ನನ್ನ ಮೇಲೆ ಪ್ರಭಾವ ಬೀರಿದೆ' ಎನ್ನುತ್ತಾರೆ ಅವರು.

1951ರಲ್ಲಿ ವಿಶ್ವಜಾಂಬೂರಿ ಆಸ್ಟ್ರಿಯಾದಲ್ಲಿ ನಡೆಯಿತು. ಕೊಂಡಜ್ಜಿ ಅವರು ಈ ಜಾಂಬೂರಿಯಲ್ಲಿ ಭಾಗವಹಿಸಿದರು. ಇಟಲಿ, ಸ್ವಿಟ್ಜರ್ಲೆಂಡ್, ಜರ್ಮನಿ, ಫ್ರಾನ್ಸ್, ಡೆನ್ಮಾರ್ಕ್, ಬ್ರಿಟನ್ ಹಾಗೂ ಸಿಲೋನ್ ದೇಶಗಳಲ್ಲಿ ಪ್ರವಾಸ ಮಾಡಿದರು. ಈ ವಿದೇಶ ಪ್ರವಾಸ ಸ್ಕೌಟ್ಸ್ ರಂಗದಲ್ಲಿ ಕೊಂಡಜ್ಜಿ ಅವರ ಆಸಕ್ತಿಯನ್ನು ಮತ್ತಷ್ಟು ಕುದುರಿಸಿತು.

1965ರಲ್ಲಿ ಮೆಕ್ಸಿಕೋದಲ್ಲಿ ನಡೆದ ಸ್ಕೌಟ್ಸ್ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸುವ ಸಲುವಾಗಿ ಕೊಂಡಜ್ಜಿ ಅವರಿಗೆ ಕರೆ ಬಂದಿತು. ಆದರೆ ದೇಶದಲ್ಲಿದ್ದ ತುರ್ತುಪರಿಸ್ಥಿತಿಯಿಂದಾಗಿ ಪ್ರವಾಸವನ್ನು ಕೈಬಿಡಬೇಕಾಯಿತು. 1972ರಲ್ಲಿ ಕೊಂಡಜ್ಜಿ ನೈರೋಬಿಯಲ್ಲಿ ಜರುಗಿದ 24ನೆಯ ಅಂತರರಾಷ್ಟ್ರೀಯ ಸ್ಕೌಟ್ಸ್ ಸಮ್ಮೇಳನದಲ್ಲಿ ಭಾಗವಹಿಸಿದರು. ಭಾರತದ ಪ್ರತಿನಿಧಿಯಾಗಿ, ವಿದೇಶಗಳಲ್ಲಿ ಕಂಡದ್ದನ್ನು, ಉತ್ತಮವೆಂದು ಭಾವಿಸಿದ್ದನ್ನು, ಅವರು ಭಾರತದಲ್ಲಿ ಕಾರ್ಯರೂಪಕ್ಕೆ ತರಲು ಉತ್ಸಾಹದಿಂದ ಶ್ರಮಿಸಿದ್ದಾರೆ. ಅಂಧ ಅನುಕರಣೆ ಅವರಿಗೆ ಹಿತವಿಲ್ಲ; ಆದರೆ ನಮ್ಮ ಪರಿಸರಕ್ಕೆ ಅನುಕೂಲವಾದ ಸಂಗತಿ, ಎಲ್ಲರ ಹಿತದೃಷ್ಟಿಯಿಂದ ಸರಿ ಎನಿಸಿದ್ದು ಅವರಿಗೆ ಸದಾ ಪ್ರಿಯವಾಗಿದೆ.

ಭಾರತ್ ಸ್ಕೌಟ್ಸ್–ಗೈಡ್ಸ್‌ನ ರಾಷ್ಟ್ರೀಯ ಪರಿಷತ್ತು ಹಾಗೂ ವ್ಯವಸ್ಥಾಪಕ ಸಮಿತಿಯ ಸದಸ್ಯರಾಗಿ ಕೊಂಡಜ್ಜಿ ಬಹುಜನರ ಪ್ರೀತಿಯನ್ನು ಗಳಿಸಿದ್ದಾರೆ. ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸುವುದರ ಮೂಲಕ, ರಾಜ್ಯದ ಸ್ಕೌಟ್ಸ್ ಚಳವಳಿಗೆ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ.

ಕೊಂಡಜ್ಜಿ ಅವರ ಸೇವಾವಧಿಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಏರಿದೆ. ಇಂದು ರಾಜ್ಯದಲ್ಲಿ ಸುಮಾರು 50,000 ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿದ್ದಾರೆ. ರಾಜ್ಯದ 5-6 ಜಿಲ್ಲಾ ಕೇಂದ್ರಗಳಲ್ಲಿ ಸ್ಕೌಟ್ಸ್‌ಗಾಗಿ ಪ್ರತ್ಯೇಕ ಕಟ್ಟಡವನ್ನು ಪಡೆಯುವ ದಿಸೆಯಲ್ಲಿ ಕೊಂಡಜ್ಜಿ ನೀಡಿರುವ ಸಹಾಯ ಸ್ಮರಣೀಯ.

ದೊಡ್ಡಬಳ್ಳಾಪುರದ 'ಡಾ. ಆನಿಬೆಸೆಂಟ್ ಪಾರ್ಕ್' ಇಂದು ಭಾರತದಲ್ಲೇ ಅತಿ ಉತ್ತಮ ಸ್ಕೌಟ್ ಶಿಬಿರ. ಈ ಶಿಬಿರದ ಪ್ರಗತಿಗೆ ಕೊಂಡಜ್ಜಿ ಅವರ ಕೊಡುಗೆ ಗಮನಾರ್ಹ. ಈಜುಕೊಳ, ಬಯಲು ರಂಗಮಂಟಪ, ಗಾಂಧಿಭವನ, ವಜ್ರಮಹೋತ್ಸವ ಭವನ, 'ದೋಣಿ-ಮನೆ', ಶಿಬಿರಾಗ್ನಿ ವೃತ್ತ- ಇವೆಲ್ಲ ಇತ್ತೀಚಿನ ಸಾಧನೆ.

ಕೊಂಡಜ್ಜಿ ಅವರ ದೂರದೃಷ್ಟಿಗೆ ಉಜ್ವಲ ಉದಾಹರಣೆ ಎಂದರೆ 'ಕೊಂಡಜ್ಜಿ ಶಿಬಿರ'. ಎಂಬತ್ತು ಎಕರೆ ವಿಸ್ತೀರ್ಣದ ಸುಂದರ ತಾಣದಲ್ಲಿ ಸ್ಕೌಟ್ ಶಿಬಿರವೊಂದು ಇಂದು ಕಂಗೊಳಿಸುತ್ತಿದೆ. ಉತ್ತರ ಕರ್ನಾಟಕದ ಸ್ಕೌಟ್ಸ್-ಗೈಡ್ಸ್‌ಗಳ ಅಗತ್ಯತೆಯನ್ನು ಇಂದು ಈ ಶಿಬಿರ ಪೂರೈಸಲು ಸಮರ್ಥವಾಗಿದೆ.

ದಾವಣಗೆರೆಯ ಧರ್ಮರತ್ನಾಕರ ಶ್ರೀ ಮದ್ದೂರಾಯಪ್ಪ ಮತ್ತು ಅವರ ಸಹೋದರ ಶ್ರೀ ಲಕ್ಷ್ಮಣಶೆಟ್ಟಿ ಅವರ 25,000 ರೂ. ಕೊಡುಗೆ 'ಕೊಂಡಜ್ಜಿ ಶಿಬಿರ'ದ ಯೋಜನೆಗೆ ನಾಂದಿ. ಸರೋವರದ ಎದುರು ಇಂದು 'ಅತಿಥಿಗೃಹ'ವೊಂದು ತಲೆ ಎತ್ತಿದೆ- ಸ್ಕೌಟ್ಸ್‌ಗಳ ಉಪಯೋಗಕ್ಕಾಗಿ. 'ಪೈರೆಪ್' ಯೋಜನೆಯ ಪ್ರಯೋಜನ ಪಡೆದು, ಶಿಬಿರದಲ್ಲಿ ಆಟದ ಮೈದಾನ, ಪೆರೇಡ್ ಮೈದಾನ, ಶಿಬಿರಾಗ್ನಿ ವೃತ್ತ, ರಸ್ತೆಗಳು ಮುಂತಾದ ಸೌಕರ್ಯಗಳನ್ನು ಕಲ್ಪಿಸಲಾಗಿದೆ. ಜಯಣ್ಣ ಚಿಗಟೇರಿ ಅವರ ಹೆಸರಿನಲ್ಲಿ ಅಷ್ಟಕೋನಾಕಾರದ ಗೋಪುರವೊಂದನ್ನು ನಿರ್ಮಿಸಲಾಗಿದೆ. ಅರಣ್ಯ ಖಾತೆಯ ಸಹಕಾರದಿಂದ 'ವೃಕ್ಷಕಾಶಿ'ಯೊಂದು ರೂಪುಗೊಂಡಿದೆ; ಅನೇಕ ಬಗೆಯ ಗಿಡ-ಮರಗಳನ್ನು ನಾವಿಲ್ಲಿ ಕಾಣಬಹುದು. ಶಿಬಿರಕ್ಕೆ ನೀರಿನ ಪೂರೈಕೆಗಾಗಿ ಎಂ.ಕೆ.ಸ್ವಾಮಿ ಅವರು ಧನಸಹಾಯ ನೀಡಿದ್ದಾರೆ. ಹರಿಹರ ಪಾಲಿಫೈಬರ್ಸ್ ಅವರ ಉದಾರ ಮನಸ್ಸಿನ ಫಲ-ಎರಡು ಲಕ್ಷ ರೂಪಾಯಿಗಳ ವೆಚ್ಚದ ಈಜುವ ಕೊಳ ಇಂದು ಶಿಬಿರದ ಒಂದು ಅಂಗವಾಗಿದೆ.

ಹಣ ಕೊಡುವ ದಾನಿಗಳಿರಬಹುದು. ಆದರೆ ದಾನಿಗಳನ್ನು ಕಂಡು ಮಾತನಾಡಿ, ಮನವೊಲಿಸಿ, ಅವರ ಇಂಗಿತ ಅರಿತು ಸಾಮಾಜಿಕ ಒಳಿತಿಗಾಗಿ ಯೋಜನೆಗಳನ್ನು ರೂಪಿಸುವ, ಸಕಾಲದಲ್ಲಿ ಅದನ್ನು ಕಾರ್ಯಗತ ಮಾಡುವ ಕೆಚ್ಚೆದೆಯ, ನಿಸ್ಪೃಹ ಕಾರ್ಯಕರ್ತರ ಕೊರತೆ ಇದೆ. ಕೊಂಡಜ್ಜಿ ಬಸಪ್ಪನವರ ದಿಟ್ಟ ಸಾಹಸ, ಸತತ ಪ್ರಯತ್ನ ಹಾಗೂ ಪ್ರಾಮಾಣಿಕ ಬುದ್ಧಿ- ಇವು ಅವರ ಯೋಜನೆಗಳಿಗೆ ಸದಾ ಯಶಸ್ಸನ್ನು ತಂದಿವೆ. ಅವರ ಸೌಜನ್ಯ ಮತ್ತು ದುಡಿಮೆ ಸಮಾಜದಲ್ಲಿ ರಚನಾತ್ಮಕ ಕಾರ್ಯಗಳಿಗೆ ಇಂಬುಕೊಟ್ಟಿವೆ.

ಕೊಂಡಜ್ಜಿ ಹಾಗೂ ದೊಡ್ಡಬಳ್ಳಾಪುರ ಶಿಬಿರಗಳಲ್ಲಿ ಸಿಬ್ಬಂದಿ ವರ್ಗದವರಿಗೆ ವಾಸದ ಮನೆಗಳ ನಿರ್ಮಾಣ ಕೊಂಡಜ್ಜಿ ಅವರ ಯೋಜನೆ. ಕೊಂಡಜ್ಜಿ ಶಿಬಿರ ಮುಂಬರುವ ವರ್ಷಗಳಲ್ಲಿ ರಾಜ್ಯದ ಉತ್ತಮ ವಿಹಾರ ಕೇಂದ್ರವಾಗಿ ಜನರನ್ನು ಆಕರ್ಷಿಸುವಂತಾಗಬೇಕೆಂಬುದು ಕೊಂಡಜ್ಜಿ ಅವರ ಅಪೇಕ್ಷೆ, ಇಷ್ಟೇ ಅಲ್ಲ; ಶಿಬಿರದ ಬಳಿ, ರೆಸಿಡೆನ್ಸಿಯಲ್ ಶಾಲೆಯೊಂದನ್ನು ಸ್ಥಾಪಿಸುವ ಬಗ್ಗೆ ಕೊಂಡಜ್ಜಿ ಯೋಚಿಸುತ್ತಿದ್ದರು. ಮೀನು ಕೊಳವೊಂದು 4 ಲಕ್ಷ ರೂ. ವೆಚ್ಚದಲ್ಲಿ ರಾಜ್ಯ ಸರ್ಕಾರದ ಸಹಾಯದಿಂದ ಸದ್ಯದಲ್ಲೇ ಅಸ್ತಿತ್ವಕ್ಕೆ ಬರಲಿದೆ. ಶಿಬಿರದಲ್ಲೊಂದು ವಿಶಾಲ ಭೋಜನ ಶಾಲೆ ಸಿದ್ಧವಾದಾಗ, ಅದೊಂದು ದೊಡ್ಡ ಕಲ್ಯಾಣ ಮಂಟಪವಾಗಿ, ಅನೇಕ ಬಡ ಕುಟುಂಬಗಳ ಮದುವೆ ಮುಂತಾದ ಶುಭ ಸಮಾರಂಭಗಳ ವ್ಯವಸ್ಥೆಗೆ ಅನುವು ಮಾಡಿಕೊಡುತ್ತದೆ.

ಇಂದು 2,500 ಜನರಿರುವ ಕೊಂಡಜ್ಜಿ ಗ್ರಾಮದಲ್ಲಿ ಶಾಲೆ, ಆಸ್ಪತ್ರೆ, ಗ್ರಾಮಾಂತರ ಗ್ರಂಥಭಂಡಾರ, ಸಹಕಾರಿ ಸೊಸೈಟಿ, ಯುವಜನ-ಮಹಿಳಾ ಮಂಡಲಿಗಳು, ಅಧ್ಯಾಪಕ ವಾಸಗೃಹ -ಇತ್ಯಾದಿ ಅನೇಕ ಸೌಕರ್ಯಗಳನ್ನು ನಾವು ಕಾಣಬಹುದಾಗಿದೆ. ಈ ಯೋಜನೆಗಳ ಕರ್ತೃತ್ವ ಶಕ್ತಿ ಕೊಂಡಜ್ಜಿ ಎನ್ನುವ ಅಂಶ ಎಲ್ಲರಿಗೂ ತಿಳಿದದ್ದೇ. ದಿಲ್ಲಿಗೆ ಹೋದರೂ ಹಳ್ಳಿಯನ್ನು ಮರೆಯದ 'ಮಣ್ಣಿನ ಮಗ'ನಾಗಿ ಕೊಂಡಜ್ಜಿ ಕಾರ್ಯಶೀಲರಾಗಿದ್ದರು. ವ್ಯಕ್ತಿಯೊಬ್ಬ ಸತತ ದುಡಿಮೆ ಕಾರ್ಯಶ್ರದ್ಧೆಯಿಂದ 'ಸಂಸ್ಥೆ'ಯಾಗಿ ನಿಲ್ಲಬಹುದೆಂಬುದನ್ನು ಕೊಂಡಜ್ಜಿ ಅವರ ಬಾಳು ತೋರಿಸಿಕೊಟ್ಟಿದೆ.

ಸ್ಕೌಟ್ ಕಾರ್ಯಕ್ಕಾಗಿ ಸುಮಾರು 7 ಲಕ್ಷ ರೂ.ಗಳ ವಾರ್ಷಿಕ ಅನುದಾನ ಸರಕಾರದಿಂದ ಸಿಗುತ್ತಿತ್ತು. 7-8 ವರ್ಷಗಳ ಹಿಂದೆ

ಈ ಅನುದಾನ ಸುಮಾರು ಒಂದು ಲಕ್ಷದಷ್ಟಿತ್ತು. ಅವರ ಪ್ರಯತ್ನದಿಂದ ಏಳುಪಟ್ಟು ಅಧಿಕ ಹಣ ದೊರಕುವಂತಾಯಿತು. ತರಬೇತಿ ಹಾಗೂ ಸ್ಕೌಟ್ ಶಿಬಿರಗಳು ಅಧಿಕ ಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ಆಕರ್ಷಿಸಿವೆ. ಸುಮಾರು ಒಂದು ಸಾವಿರ ಶಾಲಾ ಅಧ್ಯಾಪಕರಿಗೆ ಸ್ಕೌಟ್ ಕಾರ್ಯಕ್ಕಾಗಿ 20 ರೂ.ಗಳ ಮಾಸಿಕ ಗೌರವಧನ ಕೊಡುವ ಯೋಜನೆ ಕಾರ್ಯರೂಪಕ್ಕಿಳಿದಿದೆ. ಈ ಎಲ್ಲ ಸಾಧನೆಗಳ ಹಿಂದೆ ಕೊಂಡಜ್ಜಿ ಅವರ ವ್ಯಕ್ತಿತ್ವ ಹಾಗೂ ಜೀವನ ದೃಷ್ಟಿಯನ್ನು ನಾವು ಗುರುತಿಸಬಹುದಾಗಿದೆ.

**ಕೊಂಡಜ್ಜಿ ಅವರೊಡನೆ ಕೆಲವು ನಿಮಿಷಗಳು**

ಕೊಂಡಜ್ಜಿ ಅವರ ದೃಷ್ಟಿಯಲ್ಲಿ ಸ್ಕೌಟ್ ಚಳುವಳಿಯ ಭವಿಷ್ಯ ಹಾಗೂ ಅವರ ವೈಯಕ್ತಿಕ ಜೀವನ– ಒಂದೆರಡು ನಿಮಿಷ ವಿಚಾರ ವಿನಿಮಯ ಮಾಡಿದಾಗ:

ಪ್ರ : ಕರ್ನಾಟಕ ರಾಜ್ಯದಲ್ಲಿ ಸ್ಕೌಟ್ ಚಳವಳಿಯ ಮುನ್ನಡೆಯ ಬಗ್ಗೆ ತಮ್ಮ ಪ್ರತಿಕ್ರಿಯೆ ಏನು?

ಉ : ಆಗಿರುವ ಕಾರ್ಯದ ಬಗ್ಗೆ ನನಗೆ ಸಂತೋಷವಿದೆ. ಆದರೆ ಮಾಡಬೇಕಾದ ಕೆಲಸ ಇನ್ನೂ ಬಹಳ ಇದೆ. ಶಾಲೆಯ ಪ್ರತಿಯೊಬ್ಬ ವಿದ್ಯಾರ್ಥಿಗೂ ಸ್ಕೌಟ್ ತರಬೇತಿ ನೀಡುವುದು ಅವಶ್ಯಕ ಎಂದು ನನ್ನ ಭಾವನೆ. ಕಾರಣ ಇಷ್ಟೆ: ಸ್ಕೌಟ್ ನಿಯಮಗಳು ವ್ಯಕ್ತಿಯನ್ನು ಉತ್ತಮ ನಾಗರಿಕನನ್ನಾಗಿ ಮಾಡುತ್ತವೆ; ಆತನ ಚಾರಿತ್ರ್ಯವನ್ನು ರೂಪಿಸುತ್ತವೆ. ಆದ್ದರಿಂದ ಈ ಚಳುವಳಿಗೆ ಸರಕಾರ ನೀಡುವ ಹಣ ದೇಶದ ನಿರ್ಮಾಣ ಕಾರ್ಯಕ್ಕೆ ಮಾಡುವ ವಿನಿಯೋಗ.

ವಿದ್ಯಾರ್ಥಿಗಳ ತಾಯಿ–ತಂದೆಯರು ಈ ಚಳುವಳಿಯಲ್ಲಿ ಸಾಕಷ್ಟು ಆಸಕ್ತಿ ವಹಿಸುವಂತೆ ಅವರಲ್ಲಿ ಅಭಿರುಚಿ ಬೆಳೆಸುವುದೂ ಇಂದು ಅಗತ್ಯವಾಗಿದೆ.

ಪ್ರ : ಸ್ಕೌಟ್ ಚಳುವಳಿಯನ್ನು ವ್ಯಾಪಕವಾಗಿ ಹರಡುವ ದಿಸೆಯಲ್ಲಿ ಸಂಸ್ಥೆಯ ಕಾರ್ಯಕ್ರಮಗಳ ಬಗ್ಗೆ ಏನೆನ್ನುವಿರಿ?

ಉ : ಹಳ್ಳಿಗಳಲ್ಲಿ ಬಡಮಕ್ಕಳಿಗೆ ಸ್ಕೌಟ್ ಸಮವಸ್ತ್ರಗಳನ್ನು ಒದಗಿಸುವುದರತ್ತ ನಾವು ಗಮನ ಕೊಡಬೇಕಾಗಿದೆ. ಆಗ ಬಹುಮಂದಿ ವಿದ್ಯಾರ್ಥಿಗಳು ಸ್ಕೌಟ್–ಗೈಡ್ಸ್‌ಗಳಾಗುವುದು ಸಾಧ್ಯವಾಗುತ್ತದೆ. ಪ್ರತಿ ಜಿಲ್ಲೆಯಲ್ಲೂ ಸ್ಕೌಟ್ಸ್ ಸಂಘಗಳಲ್ಲಿ ಅಗತ್ಯವಾದ ಸಿಬ್ಬಂದಿಯಿಲ್ಲ; ಸಾಕಷ್ಟು ಹಣವಿಲ್ಲ. ಗೌರವ ಸದಸ್ಯರ ಉತ್ಸಾಹ–ಸಹಕಾರದಿಂದ ಈ ಕಾರ್ಯ ಈಗ ನಡೆಯುತ್ತಿದೆ. ಸಂಸ್ಥೆಯ ಪೂರ್ಣಾವಧಿ ಸಿಬ್ಬಂದಿಯ ನೇಮಕವಾದಾಗ, ಈ ಎಲ್ಲ ಕಾರ್ಯಗಳಿಗೆ ಹೆಚ್ಚು ಅವಕಾಶ ದೊರಕುತ್ತದೆ ಎಂದು ನನಗನಿಸುತ್ತದೆ.

ಶಾಲಾ–ಕಾಲೇಜು ಅಧ್ಯಾಪಕರಿಗೂ ತರಬೇತಿ ತರಗತಿಗಳನ್ನು ಏರ್ಪಡಿಸುವುದರಿಂದ ಸ್ಕೌಟ್ಸ್ ಬಗ್ಗೆ ಜನರಲ್ಲಿ ಸದಭಿಪ್ರಾಯ ಮೂಡಿಸಿದಂತಾಗುತ್ತದೆ. ಸಂಸ್ಥೆಯ ಉದ್ದೇಶ ಬಹುಮಂದಿಗೆ ತಿಳಿದಂತಾಗುತ್ತದೆ. ಇಂತಹ ಪ್ರಸಾರದಿಂದ ಕಾರ್ಯಕ್ಷೇತ್ರ ವಿಸ್ತಾರವಾಗುವ ಸಂಭವವಿದೆ. ನನ್ನ ದೃಷ್ಟಿಯಲ್ಲಿ, ಭಾರತದಲ್ಲಿ ಸ್ಕೌಟ್–ಗೈಡ್ ಚಳವಳಿಗೆ ಒಳ್ಳೆಯ ಭವಿಷ್ಯವಿದೆ.

ಪ್ರ : ಕೊಂಡಜ್ಜಿ ಅವರೇ, ನಿಮ್ಮ ಜೀವನದ ಗೆಲುವಿಗೆ ಪೂರಕವಾದ ಅಂಶಗಳೇನು?

ಉ : ತಾಳ್ಮೆ... ತಾಳ್ಮೆ! ನಿಮಗೆ ಸಾಕಷ್ಟು ತಾಳ್ಮೆ ಇದ್ದರೆ, ಕೈಹಿಡಿದ ಕೆಲಸವನ್ನು ಮುಂದುವರಿಸುವ ಮನಸ್ಸಿದ್ದರೆ, ಗೆಲುವು ನಿಮ್ಮನ್ನು ಹಿಂಬಾಲಿಸುತ್ತದೆ. ಜೀವನ ಏರಿಳಿತಗಳ ದಾರಿ. ಪ್ರತಿಕೂಲ ಸನ್ನಿವೇಶಗಳು ಎದುರಾದಾಗ, ತಾಳ್ಮೆಗೆಟ್ಟು ಕಂಗಾಲಾದರೆ ಪ್ರಯೋಜನವಾದರೂ ಏನು?

'ಕಾಡುವ್ಯಸನ' ವ್ಯಕ್ತಿಯನ್ನು ಕೊಲ್ಲುತ್ತದೆ. ಅಂತಹ ವ್ಯಸನದಿಂದ ನಾನು ದೂರ. ಸೋಲನ್ನು ಯಶಸ್ಸಾಗಿ ಪರಿವರ್ತಿಸುವ ಏಕಮಾತ್ರ ಸಾಧನ ಎಂದರೆ; ಬಂದದ್ದನ್ನು ನಗುಮುಖದಿಂದ ಸ್ವೀಕರಿಸುವುದು. ಸೋಲನ್ನು ಅತಿಯಾಗಿ ಮನಸ್ಸಿಗೆ ಹಚ್ಚಿಕೊಳ್ಳದೆ, ಸಮಸ್ಯೆಯನ್ನು ಬಿಡಿಸುವುದಕ್ಕೆ ಗಮನ ಕೊಡುವುದು. ಕೈಕಟ್ಟಿ ಕುಳಿತು ಯೋಚಿಸಿ. ಮನಸ್ಸನ್ನು ಕೆಡಿಸಿಕೊಳ್ಳುವುದರ ಬದಲು, ಬಾಳಿಗೊಂದು ಅರ್ಥ ಬರುವಂತೆ ನೆಮ್ಮದಿಯಿಂದ ಇರುವುದೇ ಗೆಲುವಿನ ಮೂಲ.

# Lotus that Bloomed in the Mud

Sri Taralabalu Jagadguru
Dr. Shivamurthy Shivacharya Mahaswamiji
*Sirigere, Chitradurga Taluk*

Translated by
Dr. Annapur Shivakumar
*Chicago, IL, USA*

*The Title for this column might confuse a few of you. What is this? In place of the topic that readers were asked to expect as indicated in my last week's column, something else is there! You might compare it to the forecasts of a BJP victory in the Bellary reelections even before the official results were out. Intellectuals need to condemn the vengence politics spreading freely in our country promoted by individuals using innocent people like herds of sheep for their selfish needs. It is appropriate to remember the protocols that were in place for elections to district board and other local organizations under the Maharaja of Mysore in pre-independence India. If for any reason, an elected individual chose to resign a particular post, it was immediately filled by a candidate with the next highest number of votes from among the defeated candidates. There was never a reelection. It would be worthwhile to think as to what would be the scenario in present day Karnataka politics if those old protocols were still in place!*

*Whatever it is! This week's column is certainly not about the dirty Bellary politics. This column is dedicated to a perfect gentleman who bloomed like a lotus from the mud with none of the mud sticking to him and engaged in state and national level politics. As discussed in my previous column, another book, 'Kondajji Basappa' released by Vidhana Mandala Granthalaya Samithi as part of 'Pratibhavanta Samsadiya Patu Pustaka Malike' (Exceptionally Talented Parlimentarian Book Series) is written by the eminent literary scholar of our state, Dr. Saa.Shi. Marulayya. This book has 5 chapters. The first chapter gives a brief biographical sketch of Kondajji Basappa. The second part covers the discussions held in the assembly hall while he was the state minister in the sixties. The discussions that took place in the Parliament Hall while he was the deputy central minister of health are presented in the third part. The fourth part presents the report on the organization of Karnataka Panchayat Raj that he presented to the government in his capacity as the Chairman of that committee. An album displaying rare photographs of the family and public life of Kondajji Basappa forms the fifth part.*

*There are many people whose names are accompained with prefixes and suffixes proclaiming the degrees they earned from Universities or the titles presented to them at various points in their lives. But for Kondajji Basappa, the only appendage to his name was his birthplace, "Kondajji" which was near and dear to him. In fact, the name of the village Kondajji was identified more with his name rather than as the location near the city of Davangere. He used to say, "If every officer or a state minister adopt and work for the welfare of just one village during their administration, we can turn India into a Ramarajya (the state of Sri Rama, the Lord-incarnate, in whose rule the state flourished and earned the dintinction of being referred to as the ideal land of honesty, truth and prosperity) within ten years". The author of the book above has given a vivid description of how Basappa used his village Kondajji as his work centre for the welfare of the village and the state. In keeping with Basavanna's words, 'Mrudu Vachanave sakala Japamgalayya, Mrudu Vachanave sakala tapamgalayya,*

*saduvinayave sadashivanolumeyayya...' (soft speech is a prayer, soft speech is a meditation, and humility is the love for God...), Kondajji Basappa was a role model adopting simplicity and humility in his speech and actions. I always carry a small note book in my pocket to note down my thoughts and my tasks and it has helped me to act upon them without lapses. The scenario of Kondajji Basappa welcoming me to my country as I landed at Bangalore Airport after my studies at the Vienna University is still afresh in my mind. A round face, sharp eyes, large body build, adorned with a Gandhi cap on his head, jubba and panche on his body, he presented an imposing and dignified personality. He never exhibited the arrogance of the power he held or the aura of ministerial position. Incidences of many rare events that happened in his life are documented in the book mentioned above, and I have chosen a few to present here:*

*1. Once when he was a cabinet minister in the central government, he had attended a public event at Dharwad and afterwards as he left for Davangere, as per the police department protocol, a line of police vehicles started escorting his car from the front and the back. Kondajji alighted from his car, when the Police Officer approached him to find out the reason, he smiled at him, shook his hands and said, "You don't need to follow me. I have fear of no one. You can go back to your station".*

*As I was reading this incidence, I was reminded of two cartoons I had seen in some newspaper. In the first cartoon, a thief is walking with policemen. A child who sees this cartoon asks his father who that person in the picture is. Father explains, "The one in the middle is a thief, the one behind him and the one infront of him are the policemen". In the second cartoon, a cabinet minister is going somewhere. There are several policemen both behind and in front of him. The child looking at this is excited and tells his father, "Look, a very big thief here, so many police for him!" Poor child, he cannot make out who is the thief and who is the minister, true, but does that really matter? In the current polluted political atmosphere, may be we should agree with the child!*

*2. Kondajji Basappa was a man of poise but he was also very firm in his stance and would not-yield to pressure of any kind. Once, a transfer order was issued for an Engineer to be moved to Bidar. He did not want to move to Bidar and tried to get the transfer order cancelled by sending a recommendation letter to Kondajji Basappa from a very good friend of his. Kondajji did not like it one bit. But he did not lose his patience. He wrote back to his friend, "Look, Bidar also is in our Karnataka State only. People just like you and I are there as well Let the honorable gentleman's service be available to them also. Please ask him to go there and report immediately as per the orders. Please do not take this personally."*

*3. We could say that the other name for the Scouts and Guides Organization is Kondajji Basappa. Even though he resigned from the central cabinet minister's post, he worked incessantly for the growth of the Scouts Organization until his last breath. As Chief Commissioner for that organization he had adapted a strict regimen in his lifestyle. He was extremely punctual to any meeting or a function. As a State Cabinet Minister, once he had to travel from Belgaum to Davangere to attend a function. His beloved wife Sarvamangalamma was also with him. The car they were in stopped on the way due to some mechanical failure. The driver reported that it would take a few hours to get it fixed. Thinking that he would be late for his commitment to be at the function, he got down from his car with his wife and hitched a ride in a*

# Kondajji Basappa

S.B. Bondade
*Retired Principal of Central College*
*Former Director of Collegiate Education*
*Govt. of Karnataa*

*Due to some accidental circumstances Sri Kondajji Basappa's acquaintance with me began very much earlier than my acquaintance with him. Though I do not consider myself senior to him in the sterline qualities of his head and heart, I claim my absolute and unquestionable seniority in one respect and this is in the matter of our respective ages. Owing to the accident that I am about nine years older, I was much earlier at school and college. I had completed my B.A. at Bangalore, L.L.B. at Poona and later my B.Sc. (Special) in Physics of the London University. I happened to be the first to go to London for higher studies from Davanagere and neighbouring areas and when I returned to Davanagere from London after getting a first class Honours degree in Physics, the people of Davanagere arranged a special welcome gathering to felicitate me on my successful sojourn in London. At that time Sri Kondajji was studying in the Davanagere High School. He worked as one of the volunteers for maintaining order on that occasion. This he told me when we were together on the same platform on a much later occasion. He told then that all the young students of the High School held me in high regard and wanted to emulate my example in the field of education. That is how the acquaintance on his part started.*

*Later on he qualified himself in law and began his practice. I was working in some outside colleges as the Professor of Physics. During vacations we met sometimes at Davanagere where my elder brother also was practising law.*

*During my life I have met many people but Shri Kondajji is a class by himself. His qualities of head and heart one does not usually come across. His utter simplicity, Gandhian humility, his attitude which never assumes that he is superior to others his freedom from anger, hatred and malice, his desire to be always helpful to others, are some of his qualities which one does not come across very often. Lord Basaveshwara has said "ಎನಗಿಂತ ಕಿರಿಯರಿಲ್ಲ, ಶಿವಭಕ್ತನಿಗಿಂತ ಹಿರಿಯರಿಲ್ಲ". Shri Kondajji always reminds me of this. From his talk, attitude and bearing one can never say whether he is a struggling lawyer or a legislator or a Member of the Parliament or a Minister at Bangalore or at the Centre. He is unaffected by all these external transient circumstances. We find that inimitable benign smile never departs from his radiant and calm face under all circumstances.*

*When I became the principal of the Central College and a little earlier, he was on the Syndicate of the Mysore University. When we met he would enquire about my welfare and that of my family. Unfortunately my only son developed epilepsy when he was eleven. Shri Kondajji ofcourse was aware of it. I do not know how; but he came to know that one Shri S. Manjunath, a reader in English in the University of Mysore, though not a physician, knew some medicine for epilepsy which knowledge he had secured from a Sadhu. He came to my place once and asked me to contact him. What surprised me was that he did not leave it at that, but contacted Shri Manjunath and requested him to meet me and treat my son. When Shri Manjunath himself came and began to*

*treat my son, I was simply surprised beyond words. I must say that the epilepsy of my son which had defied for more than 10 years all kinds of treatment- allopathy, homoeopathy, ayurveda, psychiatry and so on yielded within one month to this wonderful treatment. Should I say how grateful I am to Shri Kondajji for this great service which he rendered to me! He continued to take interest in my son's progress and when my son began to run a small printing press he spoke to a few friends of his to include his press in their approved lists. He has been a true Scout and his life is a shining example of the spirit of service.*

*I think he was a Minister in the then Mysore State Government when he had some problem in the matter of a career for his son, whom he wanted to become a doctor. Unfortunately his son had taken a combination of subjects which did not give him eligibility for the medical course. Instead of ringing me up or asking me to meet him, he came personally to me and asked whether I could suggest a way out. I told him of a provision in the rules regulating the Pre-University course, where a student could take up another combination of optional subjects and after keeping term at a college could take the exam in those subjects. He was glad and followed it up and ultimately his son became eligible for the medical course. It was such a simple thing but Shri Kondajji remembered it to me after many years, when I had completely forgotten it. Such is the transparent simplicity and extreme goodness of Shri Kondajji.*

*I had retired after serving as the First Director of Collegiate Education in Karnataka. Some years later the management of the Bapuji Educational Association wanted to tone up the Arts, Science and Commerce College they were running at Davanagere and approached me to become its Principal. But I was very reluctant. They approached Shri Kondajji, who met me and persuaded me to accept the same.*

*I could give more instances but they are sufficient to show his greatness in his humility, simplicity and equanimity under all circumstances and the many vicissitudes- high and low, success and failure, pleasure and pain-through which he has passed. Essentially he is a noble gentleman imbued with the spirit of service to humanity. He reminds me of a verse in the Bhagavad Gita-*

*ಅದ್ವೇಷ್ಟಾ ಸರ್ವ ಭೂತಾನಾಂ ಮೈತ್ರಃ ಕರುಣ ಏವಚ ।*
*ನಿರ್ಮಮೋ ನಿರಹಂಕಾರಃ ಸಮದುಃಖಸ್ಸುಖ ಕ್ಷಮಿ ॥*

**"Try to leave this world a little better than you found it and, when your turn comes to die, you can die happily in feeling that at any rate you have not wasted your time but have done your best".**

**- LORD BADEN POWELL**

# ಕೊಂಡಜ್ಜಿ ಹಿರಿಮೆ

ಎಂ.ಆರ್. ಲಕ್ಷ್ಮಮ್ಮ
ಉಪಾಧ್ಯಕ್ಷರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ಮಾಜಿ ಉಪಸಭಾಪತಿಗಳು
ಕರ್ನಾಟಕ ವಿಧಾನ ಪರಿಷತ್ತು, ಬೆಂಗಳೂರು

**ಕೊಂ**ಡಜ್ಜಿ ಎಂದರೆ ಕೊಂಡಜ್ಜಿ ಬಸಪ್ಪನವರು ಅನ್ನುವಷ್ಟರ ಮಟ್ಟಿಗೆ ತಮ್ಮೂರಿನ ಏಳ್ಗೆಯಲ್ಲಿ ತಾದಾತ್ಮ್ಯ ಭಾವ ಬೆಳೆದು ಬಿಟ್ಟಿದೆ ನಮ್ಮ ಚೀಫ್ ಸ್ಕೌಟ್ ಕಮೀಷನರಲ್ಲಿ.

ಎಲ್ಲ ಗ್ರಾಮಗಳಂತೆ, ಲಕ್ಷಾಂತರ ಭಾರತೀಯ ಗ್ರಾಮಗಳಂತೆ, ಕೊಂಡಜ್ಜಿಯಾದರೂ ಮೊನ್ನೆ ಮೊನ್ನೆಯವರೆಗೆ ಅಜ್ಞಾತವಾಗಿತ್ತು. ತನ್ನ ಐತಿಹಾಸಿಕ ಐಸಿರಿಯನ್ನು ಮರೆತುಬಿಟ್ಟಿತ್ತು. ತನ್ನದೇ ಆದ ಯಾವ ವೈಶಿಷ್ಟ್ಯವನ್ನೂ ಪಡೆಯದೆ, ಸಾದಾ ಸಾದವಾಗಿತ್ತು.

ಆದರೆ ಒಂದಾನೊಂದು ಕಾಲದಲ್ಲಿ ಕೊಂಡಜ್ಜಿ ಹೋಬಳಿಯ ಮುಖ್ಯ ಗ್ರಾಮವಾಗಿತ್ತು ಎಂಬುದನ್ನು ಲೂಯಿಸ್‌ರವರು ಪ್ರಕಟಿಸಿದ ಎಫಿಗ್ರಾಫಿಯಾ ಕರ್ನಾಟಿಕಾ ಎಂಬ ಶಾಸನ ಸಂಕಲನ ಗ್ರಂಥದಿಂದ ತಿಳಿಯಬಹುದು.

ಕೊಂಡಜ್ಜಿಯ ಮತ್ತದರ ಆಸುಪಾಸು ಗ್ರಾಮಗಳ ಪರಂಪರೆ ಏನಿತ್ತು ಎಂಬುದನ್ನು ಸೂಚಿಸುವೆ.

ಕ್ರಿ.ಶ. 1367 ಅಂದರೆ ಶಕವರುಷ 1209ರಲ್ಲಿ ಮುದ್ರೆ ಪುಟ್ಟ ಅಯ್ಯಗಳು ಶ್ರೀ ವಿರೂಪಾಕ್ಷ ದೇವರಿಗೆ ದಾನವನ್ನಿತ್ತರೆಂದು ಹೇಳುವ ಶಾಸನವೊಂದು ಕೊಂಡಜ್ಜಿಯಲ್ಲಿದೆ. ಇಂಥ ಹತ್ತಾರು ದಾನಗಳ ವಿವರವನ್ನು ಸುತ್ತಮುತ್ತಲ ಗ್ರಾಮಗಳಲ್ಲಿ ಸಿಕ್ಕ ಶಾಸನಗಳು ಬಿತ್ತರಿಸಿವೆ. ಹತ್ತಿರದ ಕಡ್ಲಬಾಳ ಗ್ರಾಮದಲ್ಲಿ ಉತ್ತರಾಯಣ ಸಂಕ್ರಾಂತಿ ಸೂರ್ಯಗ್ರಹಣ ನಿಮಿತ್ತ ಮಹಾಪ್ರಭು ಸಾಂತಗೌಡನ "ಕಾಲಂಕರ್ಚಿ" ಕಡಲಬಾಳ ಮೂಲಸ್ಥಾನದ ಕಲಿದೇವ ಸ್ವಾಮಿಯವರಿಗೆ ಭೋಗಕ್ಕೆ ದಾನ ನೀಡಿಕೆ.

ಶಾಬನೂರು "ಪಿರಿಯ ದಂಡನಾಯಕಿತಿ ಕಾಳಿಕವ್ವೆ ಪಾರ್ಶ್ವದೇವರ ಪೂಜೆಗೆ ಗದ್ದೆ ಬಿಟ್ಟಿದ್ದಾಳೆ. ಅಂದರೆ ಮಹಿಳೆಗೆ ತನ್ನ ಸ್ವಂತ ಹೆಸರಲ್ಲಿ ದಾನ ಕೊಡುವ ಪರಿಪಾಠವಿತ್ತು. ಇದೇ ಪ್ರಕಾರ ಕಲ್ಲೇಶ್ವರ ದೇವಾಲಯ ಬಳಿ ಸೇನಾಪತಿ ದಂಡನಾಯಕರ ಅರ್ಧಾಂಗ ಲಕ್ಷ್ಮಿ" ಮಹದೇವಿ ದಣ್ಣೂಯಕಿತಿಯರು" ಧಾರಾಪೂರ್ವಂ ದಾನ ಬಿಟ್ಟಿದ್ದಾಳೆ. ಆದರೆ ಗೊಳದ ಐಗಳು ಸಮಸ್ತರು ತಮ್ಮ ಸಮ್ಮತದಿಂದ ದಾನ ನೀಡಿದ್ದಾರೆ.

ಹೀಗೊಂದು ದಾನದ ಪರಂಪರೆ, ಅಲ್ಲದೆ ಕಲಿತನದ ಪರಂಪರೆಯನ್ನು ಕಾಣುವೆವು. ಕೊಂಡಜ್ಜಿಯಲ್ಲಿರುವ ಶಾಸನ ಪ್ರಕಾರ, ಯಾದವ ನಾರಾಯಣ ಮಹದೇವರಾಯನದಳ ಕಾವದೇವನ ಮೇಲೆ ಕಾದುವಾಗ, ಆ ಕಾವದೇವನ ಕಡೆಯ ಪೊರಣನಾಯಕ ಕಾದಿ ಸುರಲೋಕ ಪ್ರಾಪ್ತನಾದ. ಇದೇ ಪ್ರಕಾರ ಗಂಗನರಸಿ ಗ್ರಾಮದ ಇನ್ನೊಂದು ಕಲ್ಲು, "ಸಮರಂಗದೊಳು ಸ್ವಾಮಿ ಭೃತ್ಯಾಚಾರದಿಂ ಗೆಲ್ದು ಸ್ವರ್ಗಸ್ಥನಾದ ವೀರಬೆಯಿದೇವನ" ಅಮರಕತೆ ಸಾರುತ್ತಿದೆ ಶಾಬನೂರಿನ ವೀರಗಲ್ಲು "ಕನವ ನೆಟ್ಟಿ ಮಗ ಕೊಂಡನಂಬಿ ಇರಿದು ಮೆರೆದು ಕಾದಿ ಹಲಬರಂ ಕೊಂದು ಸುರಲೋಕಪ್ರಾಪ್ತನಾದ" ಎಂದು ಹೇಳುತ್ತದೆ, ಅದೇರೀತಿ ಶ್ರೀಕರಣದ ನಾಗಯ್ಯನೂ ಕೃತಕೃತ್ಯನಾದನಂತೆ. ಬೊಮ್ಮಗೌಡನ ಮಗ ಸೋಮಗೌಡ, ಹರಿಪಗೌಡ "ಕೊಂಡುಜ್ಜಿಯ ದಾರಿಯಲು" ವೀರ ಸ್ವರ್ಗ ಐದಿದರು. ಬರೀ ಗೌಡರದೇ ಅಲ್ಲ ಈ ಅಗ್ಗಳಿಕೆ! ಅಕ್ಕಸಾಲಿ ಸಂಕೋಜ ತನ್ನ ಅಣ್ಣನಿಗೆ ವೀರಗಲ್ಲು ನೆಡಿಸಿದ. ಕಡ್ಲಬಾಳು ಗ್ರಾಮದ ಪುರುಷೋತ್ತಮ ನಾಯ್ಕನು, ಬೀರಾರಿ ಭೀಮದೇವ ಎಂಬಾತ "ಊರ ಕೊಂಡಹೆನೆಂದು ಯಾಳು ಕುದುರೆ ಸಹಿತ ಬಂದು ಕಾದಿದಲ್ಲಿ ವೂರ ಹಿಂದಕ್ಕೆ ಕೊಂಡು ಕಾಳಗ ಗೆದ್ದು" ಸ್ವರ್ಗಸ್ಥನಾದ. ಸಹಜವಾಗಿಯೇ ಅವನ ಶ್ರೀಕಾರ್ಯಕ್ಕೆ ದತ್ತಿ ಬಿಟ್ಟರು.

ಇನ್ನು ಕಕ್ಕರಗೊಳ್ಳದ ಬಿದಿಯುಗವುಡನ ಪ್ರತಾಪ ಸ್ಮರಣೀಯವಿದೆ. "ವೂರ ಜೀವ ದನಮಂ ಕೊಂಡಲ್ಲಿ ಕಾದಿ ಸತ್ತು ಸ್ವರ್ಗ "ಪಡೆದ ಬಿದಿಯಣ" ತಾಂ, ಜನಮೆಚ್ಚೆ ಕೂಡಿದ ಶಿವಪದಮಂ ತುರುವ ಕೊಂಡುಭರದಿಂ"

ಸಾರತಿ ಗ್ರಾಮದೊಬ್ಬ ವೀರ, ಸ್ಕೌಟು ನಿಯಮ ಎಂದು ನಾವು ಏನನ್ನು ಭಾವಿಸುತ್ತೇವೋ, ಆ ಪುರೋಪಕಾರ ಬುದ್ಧಿಯನ್ನು ಅಪ್ರಮಿತವಾಗಿ ಮೆರೆದ. ಇವನು "ಮೆಯನಾಯ್ಕನವರ ತಾಯಿಯನು ಸಾಂಗಲಿಗೆ ಪುರರ ಗುಡ್ಡಕೆ

ಕಳುಹುವಲ್ಲಿ ಮಲ್ಲಿ ಪ್ರಹಾರಿಯು ತಡೆಯಲು ಕಾದಿ ಲೇಸು ಮಾಡಿಬಿದ್ದನು. ಎಂತಹ ಧೀರ ಕೃತ್ಯ!

ಹರಿಹರ ಎಂಬ ಹೆಸರೇ ಮಹಭೇದಗಳನ್ನಳಿಸಲು ಮಾಡಿದ ಪ್ರಯತ್ನದ ದಿವ್ಯಸಾಕ್ಷಿ. ಈ ಸಮನ್ವಯದ ಸಾಮರಸ್ಯದ ಮಾರ್ದನಿಯನ್ನು ಗಂಗನರಸಿ ಗ್ರಾಮದ ಬಸವಣ್ಣ ದೇವರ ಎದುರಿಗೆ ನಿಲ್ಲಿಸಿದ ಶಾಸನದ ಒಕ್ಕಣೆಯಲ್ಲಿ ಕೇಳುವೆವು. ಇಲ್ಲಿಯ ನಾಯಕನ ಬಿರುದು "ಶೈವ ವೈಷ್ಣವದ ಭೇದವಿದ್ದ ಹುಂಸನುಂ" ಇಲ್ಲಿ ಬಿಟ್ಟ ದಾನವೆಂದರೆ "ಶ್ರೀ ಹರಿಹರದೇವರ ಲಕ್ಷುಮಿದೇವಿ ಯರ ಪಾರ್ವತ ದೇವಿಯರ ರಥ ಉತ್ಸವಕ್ಕೆ" ಉಚಿತೋಚಿತ ಕಾರ್ಯ. ಇನ್ನು ವ್ಯವಹಾರದ ನಯಜ್ಞತೆಯನ್ನು ಗಮನಿಸಿ.

ಕುಂದವಾಡದ "ಅಭಿನವ ಕೇತಲ ದೇವಿ", 1167ರಲ್ಲಿ ಬುಧವಾರ ಮಹಾ ಸಂಸ್ಥೆಯ ಮಾಡಿ" ಎಂದು ನಿಯಮಿಸಲು "ಮಹಾಪ್ರಸಾದವೆಂದು ಕೈಗೊಂಡು ಅಯ್ಯವಳೆಯ ಅನಿಯ ನೂರ್ವರ್ ಸಾಮಿಗಳು ಉಭಯ ನಾನಾದೇಸಿ, ನಾಲ್ಕು ನಾಡಂ ಆ ಪಂಚಮಠದ ತಪೋಧನ ಮುಖ್ಯವಾದ ಎಕ್ಕೋಟಿಗಳುಂ, ಅಸಂಖ್ಯಾತ ಗಣಿಂಗಳುಂ ಹದಿನೆಂಟು ಸಮಯಮುಂ ಸೇರಿ ದಕ್ಷಿಣ ಸೌರಾಷ್ಟ್ರ ಎಂದು ಹೆಸರಾಂತ ಕುಂದವಾಡದಲ್ಲಿ ಬುಧವಾರ ಸಂತೆ ಏರ್ಪಡಿಸಿದರಂತೆ.

ಇಂತಹ ಭವ್ಯ ಪರಂಪರೆಯನ್ನುಳ್ಳ ಕೊಂಡಜ್ಜಿ ತನ್ನನ್ನು ತಾನೇ ಮರೆತಿದ್ದ ಸಮಯದಲ್ಲಿ, ಸುತ್ತಲೂ ಕವಿದ ಅಜ್ಞಾನ ಹರಿದು, ಜನರಲ್ಲಿ ಉತ್ಸಾಹ ಚಿಮ್ಮಿಸಿ, ನೂರಾರು ರೀತಿಯ ಸರಕಾರ ಮತ್ತು ಸಾರ್ವಜನಿಕರ ನದವನ್ನು ಹಠದಿಂದ ಶ್ರಮದಿಂದ ಗಳಿಸಿ, ಕೊಂಡಜ್ಜಿ ಗ್ರಾಮವನ್ನು ಮರಳಿ ಒಂದು ವಿನೂತನ ಯಾತ್ರಾಸ್ಥಳವನ್ನಾಗಿ ಮಾಡಿ ಪವಾಡ ಮೆರೆದಿದ್ದಾರೆ ಬಸಪ್ಪನವರು. ಅವರ ಆದರ್ಶ ಅಭಿನಂದನೀಯ, ಅನುಕರಣ ಯೋಗ್ಯ!

---

**"ಯಾರು ತಮ್ಮ ಮಕ್ಕಳ ಪುರೋಭಿವೃದ್ಧಿಗೆ ಮಾತ್ರವಲ್ಲದೆ, ಇತರರ ಮಕ್ಕಳ ಪಾಲನೆಯ ಬಗ್ಗೆಯೂ ಆಸಕ್ತಿವಹಿಸುವರೋ, ಅಂತವರು ಮಾಡುವ ಕೆಲಸದ ಉದ್ದೇಶವು ಅತ್ಯುನ್ನತವಾದುದು. ದೈವಿಕವಾದುದು. ಅದಕ್ಕಿಂತಲೂ ಉತ್ತಮ ಪರಿಶ್ರಮ ಬೇರೊಂದಿಲ್ಲ."**

**- ಸಾಕ್ರಟೀಸ್**

---

**ನನ್ನ ದೃಷ್ಟಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಅತ್ಯುತ್ತಮ ಆಸ್ತಿ.**
**ಅವರು ಹೆಚ್ಚು ವಿಕಾಸಗೊಂಡಷ್ಟೂ ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.**

**- ಪಂಡಿತ್ ಜವಾಹರಲಾಲ್ ನೆಹರು**

---

**ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ**
**ಪ್ರತಿಯೊಬ್ಬರನ್ನೂ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಕಳುಹಿಸುತ್ತಿದ್ದೆ.**

**- ಡಾ॥ ಅನಿಬೆಸೆಂಟ್**

# ಚಿಗಟೇರಿಯಲ್ಲಿ ಕೊಂಡಜ್ಜಿ

**ನಾಡೋಜ ಮುದೇನೂರ ಸಂಗಣ್ಣ**
ಜಾನಪದ ತಜ್ಞರು-ಸಾಹಿತಿಗಳು, ಚಿಗಟೇರಿ
ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ

**ಮನೆ ನೋಡಾ ಬಡವರು; ಮನ ನೋಡಾ ಸಂಪನ್ನರು!**
**ಧನ ನೋಡಾ ಬಡವರು; ಘನ ಮನ ಸಂಪನ್ನರು**
**ಕೂಡಲ ಸಂಗನ ಶರಣರು, ಕರುಳಿಲ್ಲದ ಕಲಿಗಳು**
**ಆರಿಗೂ ಉಪಮಿಸಬಾರದು** – ಬಸವಣ್ಣ

ಪ್ರಭುದೇವರ ಮಾತು ನಿಜ- ಎತ್ತಣ ಮಾಮರ ಎತ್ತಣ ಕೋಗಿಲೆ! ಸಮುದ್ರದೊಳಗಣ ಉಪ್ಪು ಬೆಟ್ಟದ ಮೇಲಣ ನೆಲ್ಲಿಕಾಯಿ, ಎತ್ತಣಿಂದೆತ್ತ ಸಂಬಂಧ! ಹಾಗೆಯೇ ಚಿಗಟೇರಿಗೂ ಕೊಂಡಜ್ಜಿಗೂ ಎತ್ತಣಿಂದೆತ್ತ ಸಂಬಂಧ? ಮಾಮರ- ಕೋಗಿಲೆಗಳ ಸಂಬಂಧಕ್ಕೆ ವಸಂತಋತು ಕಾರಣವಾದಂತೆ, ನೆಲ್ಲಿಕಾಯಿ-ಉಪ್ಪುಗಳ ಸಂಬಂಧಕ್ಕೆ ಉಪ್ಪಿನಕಾಯಿ ಗಡಿಗೆ ಕಾರಣವಾದಂತೆ, ಚಿಗಟೇರಿ ಕೊಂಡಜ್ಜಿ ಗ್ರಾಮಗಳ ಮಧುರ ಸಂಬಂಧಕ್ಕೆ ಶ್ರೀ ನಾರದ ಮುನಿದೇವರೇ ಕಾರಣ. ಕೊಂಡಜ್ಜಿ ಎನ್ನುತ್ತಲೇ ಬಸಪ್ಪನವರ ನೆನಪಾಗುವಂತೆ ಚಿಗಟೇರಿ ಎನ್ನುತ್ತಲೇ ನಾರದ ಮುನಿದೇವರು ಸ್ಮರಣೆಗೆ ಬರುತ್ತಾನೆ. ಕೊಂಡಜ್ಜಿ ಬಸಪ್ಪನವರ ಕುಲದೈವ ಶ್ರೀ ನಾರದಮುನಿ.

ಮೂರು ದಶಕಗಳಷ್ಟು ಹಿಂದೆ; ಆಗ ಚಿತ್ರದುರ್ಗ ಜಿಲ್ಲಾ ಬೋರ್ಡ್‌ಗೆ ಬಸಪ್ಪನವರೇ ಅಧ್ಯಕ್ಷರಾಗಿದ್ದರು. ಮನೆದೇವರ ಜಾತ್ರೆಗೆಂದು ನಮ್ಮೂರಿಗೆ ಅವರ ಆಗಮನವಾಗಿತ್ತು. ತಮ್ಮ ಬಿಡಾರದಲ್ಲಿ ಕುರ್ಚಿ-ಮೇಜುಗಳ ವ್ಯವಸ್ಥೆ ಮಾಡಿರುವುದನ್ನು ಕಾಣುತ್ತಲೇ ಕೌತುಕದಿಂದ ಕೇಳಿದರವರು-

"ಏನು, ಇವೆಲ್ಲಾ ಯಾರಿಗೆ?"

"ಅಧ್ಯಕ್ಷರ ವಾಸ್ತವ್ಯದ ಅನುಕೂಲಕ್ಕಾಗಿ?" ನಮ್ಮಲ್ಲೊಬ್ಬರ ಉತ್ತರ.

"ಬೇಡ. ಖಂಡಿತ ಬೇಡ, ನಾನಿಲ್ಲಿಗೆ ಭಕ್ತನಾಗಿ ಬಂದಿಲ್ವೆ! ಅದೂ ಅಲ್ದೆ ಈ ಕುರ್ಚಿ ಮೇಜುಗಳೆಲ್ಲಾ ಆಫೀಸು ಕೆಲಸಕ್ಕಷ್ಟೇ ಭೂಷಣ ನೋಡಿ. ಅಧ್ಯಕ್ಷನಾಗಿದ್ದಕ್ಕಾಗಿ ನೆಲ ಬಿಟ್ಟು ಅಂತರದಲ್ಲಿರೋದು ಬೇಡ, ದಯಮಾಡಿ..." ಅವರ ಈ ವಿನೀತ ನಿರಾಕರಣೆಯನ್ನು ಕಂಡು ಮೂಕನಾದೆ. ಕುರ್ಚಿಯ ದರ್ಜೆಗಾಗಿ ಭರ್ಜರಿ ಹೋರಾಡುವ ಜನರೇ ಹೆಚ್ಚಿರುವಾಗ ಎಲ್ಲರೊಳಗೊಂದಾಗಿರುವ ಇವರ ಶ್ರೀ ಸಾಮಾನ್ಯತೆಯ ಹಂಬಲ ಕಂಡು ಸ್ತೈವೆರಗಾದೆ.

ಅಂದೇ ನಡೆದ ಇನ್ನೊಂದು ಅವಿಸ್ಮರಣೀಯ ಪ್ರಸಂಗ. ರಥೋತ್ಸವದ ಮುನ್ನ ದೇವಸ್ಥಾನದಲ್ಲಿ ದೇವರಿಗೆ ಮಂಗಳಾರತಿ ನಡೆದಿರುವಾಗ ನೆರೆದ ಗಣ್ಯರೆಲ್ಲ ಜಿಲ್ಲಾ ಬೋರ್ಡ್ ಅಧ್ಯಕ್ಷರೆಂದು ಶ್ರೀ ಬಸಪ್ಪನವರನ್ನು ಪ್ರತ್ಯೇಕವಾಗಿ ಗೌರವಾನ್ವಿತ ಅತಿಥಿಯಾಗಿ ಪರಿಗಣಿಸಿದರು, ಪೂಜಾರಿಯ ಮೂಲಕ ವಿಶೇಷ ಆಶೀರ್ವಾದದ ಫಲ - ಪುಷ್ಪಗಳನ್ನು ಪ್ರದಾನ ಮಾಡಿಸಲನುವಾದರು.

"ನಿಮ್ಮಲ್ಲಿ ನಾನೂ ಒಬ್ಬನಲ್ವೆ? ದಯಮಾಡಿ ನನ್ನ ಪ್ರತ್ಯೇಕವಾಗಿ ಭಾವಿಸಬೇಡಿ..." ಎಂದು ವಿನಮ್ರರಾಗಿ ಹತ್ತು ಬೆರಳು ಹಚ್ಚಿ ಶರಣು ಹೇಳಿದರು.

ಯೌವನ ಮದ, ಅಧಿಕಾರ ಮದಗಳು ತುಂಬಿ ತುಳುಕ ಬೇಕಾದಾಗ, ಕೊಂಡಜ್ಜಿಯವರಲ್ಲಿ, 'ಸದು ವಿನಯವೇ ಸದಾ ಶಿವನ ಒಲುಮೆ'ಯೆಂಬ ನಡೆಯನ್ನು ಕಂಡೆ. ದೇವಸ್ಥಾನಕ್ಕೆ ಪೂರ್ಣಕುಂಭದ ಗೌರವ ಗಿಟ್ಟಿಸಲಿಕ್ಕಾಗಿಯೇ (ದೇವರಿಗಿಂತ) ದೊಡ್ಡವರಾಗಿ ಧಾವಿಸದೆ "ನಾನೇತರವನಯ್ಯಾ" ಎಂಬ ದಿವ್ಯ ಕಿರಿತನದ ಅಚ್ಚ ಭಕ್ತಿಯ ಮೀಸಲು ನೈವೇದ್ಯವನ್ನು ಹೃದಯದಲ್ಲಿ ತುಂಬಿಕೊಂಡು ಬಂದುದನ್ನು ನಾನು ಕಂಡೆ. ಬಸಪ್ಪನವರ ಭಕ್ತಿಯಲ್ಲಿ ಡಾಂಭಿಕತನಕ್ಕೆ ಎಂದಿಗೂ ಅವಕಾಶವಿರಲಿಲ್ಲ.

❀ ❀ ❀

1958ರ ಶ್ರೀ ನಾರದಮುನಿ ಜಾತ್ರೆಗೆ ವರ್ಷಕ್ಕಿಂತ ಹೆಚ್ಚು ಪರಿಸೆ ಸೇರಿತ್ತೆನ್ನಬೇಕು. ಸಾಯಂಕಾಲ ರಥೋತ್ಸವವೇನೋ ವೈಭವದಿಂದಲೇ ನೆರವೇರಿತು. ಆದರೆ ಕತ್ತಲಾಗುತ್ತಿದ್ದಂತೆಯೇ ಕಾರ್ಮೋಡಗಳ ದಂಡು ಒಮ್ಮೆಗೇ ಚಿಗಟೇರಿಯ ನೆತ್ತಿಯ ಮೇಲೆ ತಾಗುರ್ಗೂಡಿದವು; ಧೋಗುಟ್ಟಿ ಮಳೆ ಸುರಿಯ ತೊಡಗಿತು. ಜೊತೆಗೆ ಬಿರುಗಾಳಿ, ಕೋಲ್ಮಿಂಚು, ಬರಸಿಡಿಲುಗಳ ಆರ್ಭಟ

ಬೇರೆ! ದೂರ ಬಹುದೂರದಿಂದ ಬಂದು ನೆರೆದಿದ್ದ ಸಾವಿರಾರು ಸ್ತ್ರೀ–ಪುರುಷರು ಮಕ್ಕಳು–ಮರಿಗಳು ದಿಕ್ಕೆಟ್ಟು ಸಿಕ್ಕಮನೆ ನುಗ್ಗಿ ಆಶ್ರಯ ಪಡೆಯಬೇಕಾಯಿತು!

ಮಳೆಯಿನ್ನೂ ಪೂರ್ಣ ನಿಂತಿರಲಿಲ್ಲ. ಕೊಂಡಜ್ಜಿ ಬಸಪ್ಪನವರು ಹತ್ತಿಪ್ಪತ್ತು ಊರುಗಳ ಭಕ್ತರನ್ನು ಕಟ್ಟಿಕೊಂಡು ಸ್ಥಳೀಯ ಹಿರಿಯರನ್ನು ನೆರವಿದರು. ಮಳೆಗಾಲದ ಚಿಗಟೇರಿ ಜಾತ್ರೆಗೆ ಬರುವವರಿಗಿರುವ ವಾಸ್ತವ್ಯದ ಜರೂರಿನ ಬಗ್ಗೆ ಅಂದಿನ ಜಡಿಮಳೆಯ ಅವಾಂತರದ ಹಿನ್ನೆಲೆಯಲ್ಲಿ ಮನದಟ್ಟು ಮಾಡಿಕೊಟ್ಟು "ಶ್ರೀ ನಾರದ ಮುನಿ ದೇವಸ್ಥಾನ ಪುರೋಭಿವೃದ್ಧಿ ಮತ್ತು ಧರ್ಮಛತ್ರ ನಿರ್ಮಾಣ ಸಮಿತಿ"ಯ ಜನ್ಮಕ್ಕೆ ಕಾರಣರಾದರು. ದಾವಣಗೆರೆಯ ಗಣ್ಯ ವರ್ತಕ ದಿವಂಗತ ಬಿ.ಹೆಚ್. ನಾರಪ್ಪನವರಂಥ ಆತ್ಮೀಯರನ್ನು ಮುಂದಿಟ್ಟುಕೊಂಡು ಊರೂರು ಸುತ್ತಿ ಹಣ ಸಂಗ್ರಹಿಸಿ ಛತ್ರದ ಕಟ್ಟಡವಾಗುವಂತೆ ಮಾಡಿಯೇ ಬಿಟ್ಟರು.

ಮುಂದೊಂದು ದಿನ ಚಿಗಟೇರಿಗೆ ಬಂದು ಬಸಪ್ಪನವರು ಊರವರನ್ನು ಮತ್ತೆ ಸೇರಿಸಿ "ದೇವರ ಭಕ್ತರಿಗೆ ಜಾತ್ರೆಯಲ್ಲಿ ಮೂರುದಿನ ಮಾತ್ರ ಈ ಛತ್ರದ ಉಪಯೋಗ. ಉಳಿದಂತೆ ಇದೇಕೆ ಖಾಲಿ ಇರ್ಬೇಕು? ಅದಕ್ಕೋಸ್ಕರ ಇದರಲ್ಲಿ ಹೈಸ್ಕೂಲು ನಡೆಸಬಾರದೇಕೆ? ನಿಮ್ಮ ಮಕ್ಕಳಿಗೆ ಶಿಕ್ಷಣದ ಸೌಕರ್ಯ ದೊರೆತಂತಾಗುತ್ತೆ..." ಎಂದು ಮನವೊಲಿಸಿದರು. ಸ್ಥಳದಲ್ಲಿಯೇ ಇಪ್ಪತ್ತು ಸಾವಿರಗಳಷ್ಟು ವಾಗ್ದಾನವಾಗಿಯೇ ಬಿಟ್ಟಿತು! ತಿಂಗಳು ತುಂಬುವುದರೊಳಗಾಗಿ "ಶ್ರೀ ನಾರದಮುನಿ ಹೈಸ್ಕೂಲು" ಮೈದಾಳಿ ಈ ಭಾಗದ ಉತ್ತಮ ಶಿಕ್ಷಣ ಸಂಸ್ಥೆ ಎನ್ನಿಸಿದೆ.

❀ ❀ ❀

1962ರ ಮಾರ್ಚ್ ಮೊದಲ ವಾರ.

ಮೂರನೇ ಸಾರ್ವತ್ರಿಕ ಚುನಾವಣೆಯಲ್ಲಿ ಶಾಸಕರಾಗಿ ಆಯ್ಕೆಯಾಗುತ್ತಲೇ ಬಸಪ್ಪನವರು ಚಿಗಟೇರಿಗೆ ಆಗಮಿಸಿದರು. ಅಭಿನಂದಿಸಲು ನೆರೆದ ಆತ್ಮೀಯರೆಲ್ಲರೂ ಅಭಿಮಾನದ ಒಕ್ಕೊರಲಿನಿಂದ ಹಾಕಿದ ಹರಕೆ ಇದು–

"ಮಂತ್ರಿಯಾಗುವ ಛಾನ್ಸನ್ನು ನಾರಪ್ಪ ನಿಮಗೆ ಕರುಣಿಸಲಿ".

"ಛೇ... ಛೇ... ನಾನು ಮಂತ್ರಿ ಆಗಲಿ, ಆಗದಿರಲಿ. ನನ್ನ ಪಕ್ಷ ಅಧಿಕಾರಕ್ಕೆ ಬರೋದು ಮುಖ್ಯ. ನನ್ನ ನಾಯಕರು ಮುಖ್ಯಮಂತ್ರಿ ಆದ್ರೆ, ಬರೀ ಮಂತ್ರಿ ಅಲ್ಲ, ನಾನೇ ಮುಖ್ಯಮಂತ್ರಿ ಆದ ಹಾಗೆ..." ತಮ್ಮ ಪಕ್ಷ ಹಾಗೂ ತಾವು ಮನವಾರೆ ನಂಬಿ ನೆಚ್ಚಿದ್ದ ನಾಯಕರಲ್ಲಿ ಬಸಪ್ಪನವರಿಗಿದ್ದ ಅಸೀಮ ನಿಷ್ಕಾಮ ನಿಷ್ಠೆಯನ್ನು ಈ ಉತ್ತರದಲ್ಲಿ ಕಾಣಬಹುದು.

ಮುಂದೆ ಕೆಲವು ದಿನಗಳ ನಂತರ ರಾಜ್ಯದ ಉಪಮಂತ್ರಿಗಳಾಗಿ ಕೊಂಡಜ್ಜಿಯವರು ಇಲ್ಲಿಗೆ ಬಂದಾಗ ಊರ ಹಿರಿಯರೊಬ್ಬರು ಕಳಕಳಿಯಿಂದ ಉದ್ಗರಿಸಿದರು. "ಇದೇನಾಯ್ತು! ಕ್ಯಾಬಿನೆಟ್ ದರ್ಜೆಯ ಶಿಕ್ಷಣ ಮಂತ್ರಿ ನೀವಾಗ್ತೀರಂತ ಸುದ್ದಿಯಿತ್ತು. ಬರೀ ಉಪಮಂತ್ರಿ ಪದ! ಅದೂ ಯಾವುದೋ ಶಾಖೆಗಳನ್ನ ನಿಮಗೆ ಕೊಡೋದೆ! ತುಂಬಾ ಅನ್ಯಾಯ..."

"ನನ್ನ ನಾಯಕರು ವಹಿಸಿದ ಕೆಲಸವನ್ನು ನಿಷ್ಠೆಯಿಂದ ನಿಭಾಯಿಸೋದಷ್ಟೇ ನನಗೆ ಮುಖ್ಯ. ಯಾವ ದರ್ಜೆ ಮಂತ್ರಿ ಆದ್ರೇನು? ಯಾವ ಶಾಖೆಯಾದ್ರೇನು?"

ಥಟ್ಟನೆ ಉತ್ತರ ಬಂತು. ಶಿಸ್ತಿನ ದೇಶ ಸೇವಕನ ನಿಜವಾದ ಮನೋಧರ್ಮ ಇದಲ್ಲವೆ?

ಹೇಳಿಕೆಯ ಮಾತಿಗೆ ಧರ್ಮರಾಯನಂಥವನೂ ಮಣಿಯುತ್ತಾನಂತೆ! ಅಂದಿನ ನಾಯಕರು ತಮ್ಮ ಮಂತ್ರಿಮಂಡಳದಲ್ಲಿ ಕೊಂಡಜ್ಜಿಯವರ ಯೋಗ್ಯತೆ, ಕರ್ತೃತ್ವ ಶಕ್ತಿಗಳಿಗೆ ತಕ್ಕಸ್ಥಾನ ನೀಡಲಿಲ್ಲವೆಂಬ ಮಾತಿದೆ. ಆದರೂ ಬಸಪ್ಪನವರು ಕಟ್ಟಾಡಲಿಲ್ಲ; ತನ್ನ ಬಣ್ಣಿಸಲಿಲ್ಲ; ಇದಿರು ಹಳಿಯಲಿಲ್ಲ. ತಮ್ಮ ಪಕ್ಷದ ಗೌರವ ಒಗ್ಗಟ್ಟುಗಳನ್ನು ಕಾಪಾಡಲಿಕ್ಕಾಗಿ ಬಂದದ್ದಕ್ಕೆಲ್ಲಾ "ಹಸಾದ" ಎಂದುಕೊಂಡು ನಂಜುಂಡನಂತೆ ಚಿತ್ತ ಸಮಾಧಾನಿಯಾಗಿದ್ದರೆಂಬುದು ಹತ್ತಿರದವರಿಗೆಲ್ಲಾ ಗೊತ್ತಿರುವ ಸಂಗತಿ.

"ಇನ್ನೇನು, ಕೊಂಡಜ್ಜಿ ರಾಜಕೀಯವಾಗಿ ಗೋವಿಂದ... ಅವರ ಆಟ ಮುಗಿಯಿತು..." ಎಂದು ವ್ಯಂಗ್ಯವಾಗಿ ಹಲ್ಲು ಕಿಸಿದವರನ್ನು ಆಗ ನಾನು ಕಂಡದ್ದುಂಟು.

ಆದರೆ ಕಾಲದ ಕೈಚಳಕದಿಂದಾಗಿ ನಾಡಿಗೆ ಬಿಡುಗಡೆ ತಂದು ಕೊಟ್ಟ ಕಾಂಗ್ರೆಸ್ ಇಬ್ಭಾಗವಾದಾಗ ನಂತರ ಕೊಂಡಜ್ಜಿಯವರು ಲೋಕಸಭಾ ಸದಸ್ಯರಾದದ್ದಷ್ಟೇ ಅಲ್ಲ, ಕೇಂದ್ರದ ಉಪಮಂತ್ರಿಯೂ ಆದರು! ಹೊಟ್ಟೆಯುರುಕರ "ಭರತ ವಾಕ್ಯ" ಹುಸಿಯಾಯಿತು.

ಕೇಂದ್ರದ ಉಪಮಂತ್ರಿಯಾಗಿ ನಿಯುಕ್ತರಾಗುತ್ತಲೇ ಚಿಗಟೇರಿಗೆ ಆಗಮಿಸಿದಾಗ ಊರಿಗೆ ಊರೇ ಬಸಪ್ಪನವರನ್ನು ಸಡಗರದಿಂದ ಸ್ವಾಗತಿಸಿತು. ಬೆಂಗಳೂರಿಂದ ಅವರೊಂದಿಗೆ ಬಂದಿದ್ದ ಅಧಿಕಾರಿಯೊಬ್ಬರು ಊರ ಸಾಮಾನ್ಯನೊಬ್ಬನನ್ನು ಕೇಳಿದರೆ– "ಎಷ್ಟು ಉತ್ಸಾಹ ನಿಮಗೆ! ಮಾನ್ಯ ಉಪಮಂತ್ರಿಗಳು ನಿಮ್ಮೂರವರೇ?"

"ನಮ್ಮೂರವ್ರಲ್ಲದ್ರೇನು? ಅದಕ್ಕಿಂತ ಹೆಚ್ಚಾಗಿ ನಮ್ಮವರಲ್ಲೇನ್ರೀ?"

ಎಂಥ ಅರ್ಥಪೂರ್ಣವಾದ ತಕ್ಕ ಉತ್ತರ! ಬಸಪ್ಪನವರು ಭಕ್ತಿ ಭಂಡಾರಿಯಂತೆ ಎಲ್ಲರಿಗೂ "ನಮ್ಮವ"ರೇ ಸರಿ.

❀ ❀ ❀

ಮತ್ತೆ ಹದಿನೆಂಟು ತಿಂಗಳ ನಂತರದ ಮಾತು.

ಕೊಂಡಜ್ಜಿಯವರು ಚಿಗಟೇರಿಗೆ ಬಂದಾಗ ಆತ್ಮೀಯರೊಬ್ಬರು ಕೇಳಿದರು– "ಏನು? ಹೀಗಾಯಿತು ಬಸಪ್ಪನವರೇ! ನಮ್ಮವರೊಬ್ಬರು ರಾಷ್ಟ್ರಮಟ್ಟದ ಮಂತ್ರಿಗಳಾಗಿ ಸೇವೆ ಸಲ್ಲಿಸ್ತಾರೆಂಬ ಹೆಮ್ಮೆ ನಮಗಿತ್ತು... ಮುಂದೆ ನಿಮ್ಮ..."

ನಡುವೆಯೇ ಬಾಯಿ ಹಾಕಿ ಕೊಂಡಜ್ಜಿ ನುಡಿದರು– "ಯಜಮಾನ್ರೇ, ರಾಷ್ಟ್ರಸೇವೆ ಮಾಡ್ಬೇಕಂದ್ರೆ ಮಂತ್ರೀನೇ ಆಗ್ಬೇಕೆಂದಿಲ್ವಲ್ಲ, ಗಾಂಜಿವೀರಪ್ಪನವರು ತೀರಿದ ನಂತರ, ಹಿರಿಯರಾದ ಸಿದ್ಧವೀರಪ್ಪನವರು ಮಂತ್ರಿಗಳಾಗಿ ಬೆಂಗಳೂರು ಸೇರಿದನಂತ್ರ ನಮ್ಮ ಭಾಗದ ಬೇಕು–ಬೇಡಗಳನ್ನು ನೋಡಿಕೊಳ್ಳೋರು ಬೇಡ್ವೆ? ದಾವಣಗೆರೆಯಲ್ಲಿ ಮನೆಮಾಡಿಕೊಂಡು ಜನರ ಆಶೋತ್ತರಗಳು ಪೂರೈಸೋದಿಕ್ಕೆ ಕೈಲಾದ ಯತ್ನ ಮಾಡ್ತೇನೆ..."

ಅಧಿಕಾರಕ್ಕಾಗಿ ಹಪಹಪಿಸುವುದು ಸೇವೆ ಎಂಬುವವರಿಗೂ ಬಸವಣ್ಣನವರಿಗೂ ಎಷ್ಟು ದೂರ! ಪಲ್ಲಕ್ಕಿಯಲ್ಲಿ ಬದ್ಧಾಸನರಾಗಿಯೇ ಪ್ರಾಣ ಬಿಡಲು ಏನೆಲ್ಲಾ ಮಾಡಲೆಳಸುವ ಪದಗೇಡಿಗಳಿಗೂ ಸದ್ದಿಲ್ಲದೆ ಸೇವೆಗೆ ಹಂಬಲಿಸುವ ಕೊಂಡಜ್ಜಿಯವರಿಗೂ ಬಹಳ ಅಜಗಜಾಂತರ!

ಹೀಗೆ, ಬಸವಣ್ಣನವರು ಯಾವುದೇ ಪದವಿಯಲ್ಲಿರಲಿ ಇಲ್ಲದಿರಲಿ, ಎದ್ದು ಕಾಣುವಂತೆ ನಡೆದುಕೊಳ್ಳುವ ತಮ್ಮದೇ ಆದ ವ್ಯಕ್ತಿತ್ವವುಳ್ಳವರು. ಶ್ರೀರಾಮಚಂದ್ರನ ಚಿತ್ತ ಸಮಾಧಾನ ಅವರದು; ವನವಾಸಕ್ಕೆ ಕುಗ್ಗುವವರಲ್ಲ. ಪಟ್ಟಾಭಿಷೇಕಕ್ಕೆ ಹಿಗ್ಗುವವರಲ್ಲ. ಅಧಿಕಾರಕ್ಕಾಗಿ "ಅಯಾರಾಂ" ಆದದ್ದಿಲ್ಲ. ಅಧಿಕಾರ ಹೋಯಿತೆಂದು "ಗಯಾರಾಂ" ಎನಿಸಿದ್ದಿಲ್ಲ. ಮಲೆಯ ಕೋಡಿನ ವಜ್ರಶಿಲೆಯ ಮೇಲೆ ನಿಂತ ಗೊಮ್ಮಟನಂತೆ ದಿಟ್ಟವಾಗಿ ಸ್ವಂತ ಕಾಲಮೇಲೆ ನಿಲ್ಲುವ ಉದಾತ್ತ ತಾತ್ವಿಕ ನಿಲುವು ಅವರದು. ರಾಜಕೀಯ ರಚ್ಚೆಯಲ್ಲಿಯೂ ತರಣಿಯ ಹುಳುವಿನಂತೆ ಶುಚಿಯಾಗಿರಬಲ್ಲ ಸದ್ವಿವೇಕ ಅವರದು.

"ರಾಜಕೀಯವು ಹೃದಯಗಳನ್ನು ದೂರ ಮಾಡುವಂತಹ ಶಕ್ತಿಯೇ ಹೊರತು ಒಂದುಗೂಡಿಸುವಂತಹದಲ್ಲ" ಎಂಬ ವಿನೋಬಾಜಿಯವರ ಮಾತು ಕೊಂಡಜ್ಜಿಯವರ ಸೇವೆಯನ್ನು ನಿರಂತರವೂ ಪಡೆಯುತ್ತಾ ಬಂದಿರುವ ಅವರ ಪ್ರದೇಶಕ್ಕೆ ಹೆಚ್ಚು ಅನ್ವರ್ಥಕವಾಗಿದೆ. ರಾಜಕೀಯವಾಗಿ ಬೇರೆಡೆ ಕಾಣದ ಅಸಮಾನ್ಯ ವೈಚಿತ್ರ್ಯಗಳಿಗೆ ಅವರು ಪ್ರತಿನಿಧಿಸುತ್ತಿರುವ ಕ್ಷೇತ್ರ ಹೆಸರಾದದ್ದೆಂಬುದನ್ನು ನಾಡೇ ಬಲ್ಲದು. ಅಲ್ಲಿ ಎಲ್ಲವನ್ನೂ ರಾಜಕೀಯವಾಗಿ ನೋಡುತ್ತಾರೆ. ಎಲ್ಲದರಲ್ಲೂ ರಾಜಕೀಯ ತರುತ್ತಾರೆ. ಅಲ್ಲಿ ಯಾರು ಯಾವಾಗ "ವಿರುದ್ಧ" ಯಾವಾಗ "ಪರ" ಹೇಳಲಾಗದು. ಇಂಥ ಜ್ವಾಲಾಮುಖಿಯ ಶಿಖೆಯ ಒಡಲಲ್ಲಿ ಬದುಕುವ "ನಶೀಬ" ಬಸವಣ್ಣನವರದು!

ಪ್ರೀತಿಸುವವರನ್ನೊಂದೇ ಅಲ್ಲ, ದ್ವೇಷಿಸುವವರನ್ನೂ ಒಂದೇ ಆಗಿ ಕಾಣುವ, ಬೈದವರನ್ನು ಬಂಧುಗಳಂತೆ ಹಚ್ಚಿಕೊಳ್ಳುವ ಅವರ ಉತ್ತಮಿಕೆಯನ್ನು ಅಪಾರ್ಥ ಮಾಡಿಕೊಂಡು ಅವರ ಸಭ್ಯತೆ–ಸೌಜನ್ಯಗಳನ್ನು ದೌರ್ಬಲ್ಯವೆಂದು ಭಾವಿಸಿ ಸಲ್ಲದ ರೀತಿಯಲ್ಲಿ ವರ್ತಿಸಿದವರೆಷ್ಟೋ! ಅವರ ಒಳ್ಳೆಯ ಕೆಲಸಗಳಿಗೂ ತೊಡಕಾಗಿ ನಿಂತ ಅಡ್ಡಗಾಲುಗಳೆಷ್ಟೋ! ರಾಜಕೀಯವಾಗಿ ಅಷ್ಟೇ ಅಲ್ಲ. ಸಾಮಾಜಿಕವಾಗಿಯೂ ಅವರನ್ನು ಅಸ್ಪೃಶ್ಯರಂತೆ ನಡೆಸಿಕೊಂಡವರೂ ಇದ್ದಾರೆ! –ಸಂಪನ್ನ ದೇವರಿಗೆ ಬಿಲ್ವಪತ್ರೆಯೂ ಭುಸ್ಸೆನ್ನುವುದು ಲೋಕಾರೂಢಿ ತಾನೇ!

ಆದರೂ ಬಸವಣ್ಣ ಮಾತ್ರ ಯಾರನ್ನೂ ಬಿಟ್ಟಾಡಿಕೊಂಡವರಲ್ಲ; ಅಳುಕಿ ತಮ್ಮ ತಾತ್ವಿಕ ನಿಲುವನ್ನು ಕೈಬಿಟ್ಟವರಲ್ಲ. ಅರೆದು ನೋಡಿದವರಿಗೆ ರಸದಾಳಿ ಕಬ್ಬಾಗಿ ಕಂಡಿದ್ದಾರೆ. ಒರೆದು ನೋಡಿದವರಿಗೆ ಮಿಸುನಿ ಹೊಂಬಣ್ಣವಾಗಿ ಹೊಳೆದಿದ್ದಾರೆ. ತಿಣುಕಿ ತಿಣುಕಿ ತಿಕ್ಕಿ ತೇಯ್ದು ನೋಡಿದಷ್ಟೂ ಮೈಸೂರು ಶ್ರೀಗಂಧದ ಸವಿಗಂಪನ್ನೇ ಸೂಸಿದ್ದಾರೆ.

"ಸ್ವಗ್ರಾಮದ ಸೇವೆ ಮಾಡದವರಿಗೆ ದೇಶಸೇವೆ ಮಾಡುವ ಅಧಿಕಾರವಿಲ್ಲ" ಎಂದಿರುವ ಮಾರ್ಕಿಸ್ಟ್ ಆಫ್ ಡರ್ಫ್‌ರಿನರ ಮಾತು ಅರ್ಥಪೂರ್ಣವಾದದ್ದು. ಬಸವಣ್ಣನವರು ಕೊಂಡಜ್ಜಿಯ ಸರ್ವತೋಮುಖ ಏಳಿಗೆಗಾಗಿ ಎಷ್ಟು ದುಡಿದಿದ್ದಾರೆಂಬುದನ್ನರಿಯಲು ಅಲ್ಲಿಗೇ ಒಮ್ಮೆ ಯಾತ್ರೆ ಹೋಗಬೇಕು.

ನಾವು ಹತ್ತಾರು ಜನ ಹಲವು ದಿನಗಳ ಹಿಂದೆ ಹೋದಾಗ ಅವರೇ ಎಲ್ಲವನ್ನೂ ತೋರಿಸಿದ್ದರು-

ಇದು ಕಲ್ಯಾಣ ಮಂಟಪ. ಇದರ ನಿರ್ಮಾಣಕ್ಕೆ ನಮ್ಮೂರವರು ಹಣ ಜೋಡಿಸಿದ್ದು ಹೀಗೆ... ಇದು ಮೀನು ಸಾಕಣೆ ಕೇಂದ್ರ... ಇದು ಸ್ಕೌಟ್ಸ್ ಮತ್ತು ಗೈಡ್ಸ್ ಕಾಂಪ್ಲೆಕ್ಸ್... ಇದು ನಮ್ಮ ಧರ್ಮಪ್ರಕಾಶ ಚಿಗಟೇರಿ ಮನೆತನ ಔದಾರ್ಯದಿಂದ ಕಟ್ಟಿಸಿಕೊಟ್ಟಿದ್ದು... ಇದು ಧರ್ಮಪ್ರವರ್ತಕ ರಾಜನಹಳ್ಳಿಯವರ ದಾನದಿಂದಾದದ್ದು... ಇದು ಬಿರ್ಲಾ ಕೊಡುಗೆ... ಅಲ್ಲಿ, ರೆಸಿಡೆನ್ಸಿಯಲ್ ಸ್ಕೂಲ್ ಆಗುವುದಿದೆ... ಅದೋ ಅಲ್ಲಿ, ಸ್ನಾತಕೋತ್ತರ ಕೇಂದ್ರವಾಗಬೇಕು... ಆಚೆಗೆ ಕಾಣುವುದೇ ಕುಷ್ಠರೋಗಿಗಳ ಆಸ್ಪತ್ರೆ... ಇತ್ಯಾದಿ ಇತ್ಯಾದಿಯಾಗಿ ಹೇಳುವಾಗ ಅವರ ದನಿಯಲ್ಲಿ ನಿಧಿಗೊಂಡಿದ್ದ ಧನ್ಯತೆ, ಹರ್ಷೋತ್ಸಾಹಗಳಿಗೆ ಮಿತಿಯಿಲ್ಲ. ಅವರ ಬೊಗಸೆಗಂಗಳಲ್ಲಿ ತುಂಬಿತೇಲಿದ ಹೊಂಗನಸುಗಳನ್ನು ಕಂಡು ಮುಗ್ಧರಾಗದಿರಲು ನಮಗ ಸಾಧ್ಯವಾಗಲಿಲ್ಲ.

ಸಮಾಜೋಪಯೋಗಿ ರಚನಾತ್ಮಕ ಕಾರ್ಯಗಳಲ್ಲಿ ಬಸಪ್ಪನವರಿಗಿರುವ ಅದಮ್ಯ ಉತ್ಸಾಹ ಅದ್ಭುತವಾದದ್ದು. ಅಲ್ಲಿಯ ಎಲ್ಲಾ ಸತ್ಕಾರ್ಯಗಳಿಗೂ ತಾವೇ ಕಾರಣರಾಗಿದ್ದರೂ ಅವರಿಗೆ ಅಹಂಕಾರದ ಸೋಂಕಿರಲಿಲ್ಲ. ನೆರವು ಸೇವೆಗಳನ್ನು ನಿಜವಾದ ಸ್ಕೌಟ್‌ನಂತಹ ಕರ್ತವ್ಯ ಮನೋಭಾವದಿಂದ ಮಾಡುವರೇ ಹೊರತು ರಾಜಕೀಯ ಉಪಕಾರವೆಂದು ಪರಿಗಣಿಸುವ ಧೂರ್ತತನವಿರಲಿಲ್ಲ; ನಿಷ್ಕಾಮ ಕರ್ಮ ಅವರದು. ಯಾವುದೇ ಅಧಿಕಾರದಲ್ಲಿರಲಿ ಇರದಿರಲಿ, "ನಾನು ಬಚ್ಚ ಬರಿಯ ಬಸವ"ನೆಂದೇ ಭಾವಿಸಿದ್ದ ಹಿರಿಯ ಗುಣ ಅವರದು.

ಕೊಂಡಜ್ಜಿ ಬಸವಣ್ಣನವರದು ತುಂಬಿದ ಸಂಸಾರ. ಅವರ ಬಾಳ ಸಂಗಾತಿ, ಪುಣ್ಯಾಂಗನೆ ಸರ್ವಮಂಗಳಕ್ಕ- ತುಂಬಿದ ಕೊಡ. ಮಕ್ಕಳೆಲ್ಲ ಸುಶಿಕ್ಷಿತರಷ್ಟೇ ಅಲ್ಲ, ಸದಾಚಾರಿಗಳೂ ಹೌದು. ಒಂದು ಮಾತಿನಲ್ಲಿ ಹೇಳಬೇಕೆಂದರೆ ಅವರ ಪರಿವಾರ ಒಂದು ಜೇನುಗೂಡು. ಸರಸ ಸಜ್ಜನಿಕೆ ಸದಭಿಮಾನಗಳ ನೆಲೆವೀಡು. ಅಂತೆಯೇ ಅವರು ಸುದೈವಿ.

(ಸಂಗ್ರಹ: "ಕೊಂಡಜ್ಜಿ ಬಸಪ್ಪ")

## ಭಕ್ತಿಯೇ ಮುಕ್ತಿ

ಭಕ್ತಿಯೆಂಬ ಪೃಥ್ವಿಯ ಮೇಲೆ
ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು.
ಆಚಾರವೆಂಬ ಕಾಯಾಯಿತ್ತು
ನಿಷ್ಪತ್ತಿಯೆಂಬ ಹಣ್ಣಾಯಿತ್ತು
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು
ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

# The Ever - Smiling Kondajji Basappa

**T.S. Lucas**
*Vice-President*
*Bharath Scouts & Guides, Karnataka*



*I was asked to write an article on Sri Kondajji after the celebration of his centenary at the State Headquarters. On poring over the pamphlets and booklets issued during and after the celebrations, I was wondering as to what I can write about him. Reflecting on my not so frequent associations with him, it occurred to me that I can attempt to highlight a leaf from his personality. True to a point in the Scout Law, drafted by the Founder of the Scout Movement, Lord Baden Powell, Viz. 'A Scout smiles and whistles under all difficulties', none would have missed noticing the ever smiling feature found in the personality of Sri Kondajji Basappa.*

*Be it, meeting Scouts and Guides in a camp or presiding over various committee meetings, or a discussion scenario in a casual and informal atmosphere, the factor that binds people with him is his endearing smile. He gets dropped somewhere at many an on going route march of Scouts and Guides, looking into the eye of each marching Scout and Guide with a smile which perhaps silently whispers in their ears, 'Good show! keep it up'.*

*On a certain occasion, I happened to be in his chamber, when he had to admonish a professional on an adverse report about him. with a stern look, and a raised voice, without a frown on his face, he wanted to have an explanation. The response from the employee was apologetic, and immediately with a smile he said, 'Go, don't give room for such reports in future'. The message from that smile to the employee on that day would have certainly been, 'I mean it'. As smile always is, his smile on varying occasions gave the desired signal.*

*But his smile very often had a 'happifying' effect, that is to say, he made others happy through a smile. B.P. (Baden Powell) wrote in an autographed copy of his book 'Scouting for Boys', presented to the then camp chief of India, Sri J.T.J. Thaddeus, "Happiness is like a perfume. When you sprinkle it on others, a few drops will stick on to you". how true it is in the life of Sri Kondajji Basappa, an exemplary Scout.*

**Scouting and Guiding offers all the programmes that child wants.**
**It lives until they continue to live.**

**- LADY BADEN POWELL**

# ಸರಳ ಮಾದರಿ ಶ್ರೀ ಕೊಂಡಜ್ಜಿ ಬಸಪ್ಪನವರು

**ಕೆ.ಆರ್. ಜಯದೇವಪ್ಪ**
ಮಾಜಿ ರಾಜ್ಯಸಭಾ ಸದಸ್ಯರು
ವಕೀಲರು, ದಾವಣಗೆರೆ

ಶ್ರೀ ಕೊಂಡಜ್ಜಿ ಬಸಪ್ಪನವರು ಮದುವೆಯಾಗಿದ್ದು ನನ್ನ ಹುಟ್ಟೂರು ಮಳಲ್ಕೆರೆಯಿಂದ 2–3 ಕಿ.ಮೀ. ದೂರದಲ್ಲಿರುವ ಕಂದಗಲ್ ಗೌಡ್ರ ಶ್ರೀ ಚನ್ನಬಸಪ್ಪನವರ ಮಗಳನ್ನು. ನಮ್ಮೂರಿನಲ್ಲಿ ಆಗ ಮಾಧ್ಯಮಿಕ ಶಾಲೆ ಇರಲಿಲ್ಲ. ಕಂದಗಲ್ ಗ್ರಾಮದಲ್ಲಿದ್ದ ಮಾಧ್ಯಮಿಕ ಶಾಲೆಗೆ ನಮ್ಮೂರಿನಿಂದ ನಡೆದುಕೊಂಡು ಹೋಗಿ ಬರುತ್ತಿದ್ದೆ. ಗೌಡ್ರ ಶ್ರೀ ಚನ್ನಬಸಪ್ಪ ನವರು ಜಬರ್‌ದಸ್ತಿನ ಹಿರಿಯ ಜೀವಿ. ಅಳಿಯ ಶ್ರೀ ಕೊಂಡಜ್ಜಿ ಬಸಪ್ಪನವರ ಮೇಲೆ ಅವರಿಗೆ ಅಪಾರ ಪ್ರೀತಿ, ವಿಶ್ವಾಸ. ಕಂದಗಲ್ ಹಾಗೂ ನಮ್ಮೂರು ಮಳಲ್ಕೆರೆಗೆ ಶ್ರೀ ಕೊಂಡಜ್ಜಿ ಯವರು ಅನೇಕ ಬಾರಿ ಬಂದಿದ್ದರು. ಆಗ ನನಗೆ ಅವರ ಪರಿಚಯ ಅಷ್ಟಾಗಿ ಇರಲಿಲ್ಲ.

ಚಿತ್ರದುರ್ಗ ಜಿಲ್ಲಾ ಬೋರ್ಡ್ ಚುನಾವಣೆಗೆ ನನ್ನ ಚಿಕ್ಕಪ್ಪ ಕೂಲಂಬಿ ಬಸಪ್ಪನವರು ಮತ್ತು ರಾಂಪುರದ ಗೌಡ್ರ ಪಾಲಾಕ್ಷಪ್ಪನವರು ಕಾಂಗ್ರೆಸ್ ಅಭ್ಯರ್ಥಿಗಳಾಗಿ ಸ್ಪರ್ಧಿಸಿದ್ದರು. ಇವರುಗಳ ವಿರುದ್ಧ ಶ್ರೀ ಹೆಚ್. ಸಿದ್ಧವೀರಪ್ಪನವರು ಮತ್ತು ಶ್ರೀ ಕೊಂಡಜ್ಜಿ ಬಸಪ್ಪನವರು ಸ್ವತಂತ್ರ ಅಭ್ಯರ್ಥಿಗಳಾಗಿ ಸ್ಪರ್ಧಿಸಿ ಸೋತಿದ್ದರು. ಹೀಗಾಗಿ ಮಳಲ್ಕೆರೆ ನಮ್ಮ ಕೂಲಂಬಿ ಮನೆತನ ಶ್ರೀ ಕೊಂಡಜ್ಜಿ ಬಸಪ್ಪನವರಿಗೆ ಚಿರಪರಿಚಿತ.

ರಾಜಕೀಯ ಮನೆತನದ ಹಿನ್ನೆಲೆಯುಳ್ಳ ನಾನು ಬಿ.ಎ., ಎಲ್.ಎಲ್.ಬಿ. ಮಾಡಿದ್ದು ನನ್ನ ಚಿಕ್ಕಪ್ಪನವರಂತೆ ರಾಜಕೀಯಕ್ಕೆ ನೇರವಾಗಿ ಪ್ರವೇಶ ಮಾಡುವ ಉದ್ದೇಶದಿಂದ. ಆದರೆ ಆ ಸಮಯದಲ್ಲಿ ಶ್ರೀ ಕೊಂಡಜ್ಜಿ ಬಸಪ್ಪನವರು ವಿಧಾನ ಸಭೆಗೆ ನಂತರ ಲೋಕಸಭೆಗೆ ಸ್ಪರ್ಧಿಸಿದ್ದಾಗ ಅವರ ಪರವಾಗಿ ಸಕ್ರಿಯವಾಗಿ ಚುನಾವಣೆಯಲ್ಲಿ ಭಾಗವಹಿಸಿ ಪ್ರಚಾರ ಮಾಡಿದ್ದರಿಂದ ಅವರಿಗೆ ತೀರ ಹತ್ತಿರದವನಾದೆ. ಅನೇಕ ಸಾರಿ ಎಂದಿನಂತೆ ಇರುವ ಮುಗುಳ್ನಗೆಯಿಂದ "ಏ ಕೂಲಂಬಿ" ಎಂದು ಪ್ರೀತಿಯಿಂದ ಕರೆಯುತ್ತಲಿದ್ದರು. ಅವರು ಕರ್ನಾಟಕ ಸರ್ಕಾರದಲ್ಲಿ ಹಾಗೂ ಕೇಂದ್ರ ಸರ್ಕಾರದಲ್ಲಿ ಉಪಸಚಿವ ರಾಗಿದ್ದಾಗ ಅನೇಕ ಸಂದರ್ಭಗಳಲ್ಲಿ ಅವರನ್ನು ಭೇಟಿ ಮಾಡಿದ್ದು ನನ್ನ ಜ್ಞಾಪಕದಲ್ಲಿ ಇನ್ನೂ ಹಸಿರಾಗಿದೆ. ಸ್ಥಾನದ ಗತ್ತು ಅವರಲ್ಲಿ ಎಂದೂ ಇರಲಿಲ್ಲ. ಸದಾ ನಗುಮುಖ, ಸರಳತೆ ಎಂತಹ ವರನ್ನೂ ಆಕರ್ಷಿಸುತ್ತಿತ್ತು.

ರಾಜ್ಯ ಮತ್ತು ರಾಷ್ಟ್ರ ರಾಜಕಾರಣಕ್ಕೆ ಹೋಗುವ ಮೊದಲು ಅನೇಕ ಸಂಘ, ಸಂಸ್ಥೆಗಳಲ್ಲಿ ಅವರು ಸಕ್ರಿಯವಾಗಿದ್ದು ಅವುಗಳ ಬೆಳವಣಿಗೆಗೆ, ಅಭಿವೃದ್ಧಿಗೆ ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ಸೇವೆ ಸಲ್ಲಿಸಿದ್ದಾರೆ. ದಾವಣಗೆರೆ ವ್ಯವಸಾಯ ಸೇವಾ ಸಹಕಾರ ಸಂಘದ ಸ್ಥಾಪಕ ಅಧ್ಯಕ್ಷರಾಗಿ ಸಹಕಾರಿ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿರುತ್ತಾರೆ. ಸೇವಾ ಸಂಸ್ಥೆಗಳಲ್ಲಿ ಒಂದಾದ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಪೂರ್ಣ ತೊಡಗಿಸಿಕೊಂಡು ರಾಜ್ಯದ ಪ್ರಧಾನ ಕಮಿಷನರ್ ಆಗಿ ಅನುಪಮ ಸೇವೆಯನ್ನು ತಮ್ಮ ಜೀವಿತದ ಕೊನೆಯವರೆವಿಗೂ ಸಲ್ಲಿಸಿರುತ್ತಾರೆ. ತಮ್ಮ ಹುಟ್ಟೂರು ಕೊಂಡಜ್ಜಿ ಗ್ರಾಮದಲ್ಲಿ ಈ ಸಂಸ್ಥೆಯ ಕಾರ್ಯ ಚಟುವಟಿಕೆಗಳು ನಿರಂತರವಾಗಿ ನಡೆಯುವ ವ್ಯವಸ್ಥೆ ಮಾಡಿದ್ದಾರೆ. ರಾಜ್ಯದ ಮತ್ತು ರಾಷ್ಟ್ರದ ಅನೇಕ ರಾಜಕೀಯ ಮುಖಂಡರುಗಳನ್ನು ಕೊಂಡಜ್ಜಿಗೆ ಕರೆಸಿ ಪರಿಚಯಿಸಿದ್ದಾರೆ. ಅಂತಹ ಅನೇಕ ಕಾರ್ಯಕ್ರಮಗಳಲ್ಲಿ ನಾನು ಭಾಗವಹಿಸಿರುತ್ತೇನೆ. ಏನೂ ಇಲ್ಲದ ಕೊಂಡಜ್ಜಿ ಗ್ರಾಮಕ್ಕೆ ಎಲ್ಲಾ ಸೌಕರ್ಯಗಳೂ ಬರುವಂತಾಗಿದ್ದು ಶ್ರೀ ಕೊಂಡಜ್ಜಿ ಬಸಪ್ಪನವರ ಪರಿಶ್ರಮದಿಂದ ಎಂಬುದನ್ನು ಯಾರೂ ಮರೆಯುವಂತಿಲ್ಲ. ಶ್ರೀ ಕೊಂಡಜ್ಜಿ ಬಸಪ್ಪನವರು ಸ್ವಂತಕ್ಕೆ ಆಸ್ತಿ ಮಾಡಲಿಲ್ಲ, ಹಣ ಗಳಿಸಲಿಲ್ಲ. ಅವರು ಗಳಿಸಿದ್ದು ಜನರ ಪ್ರೀತಿ, ವಿಶ್ವಾಸ. ರಾಜಕೀಯದಲ್ಲಿ ಅನೇಕ ಸ್ಥಾನದಲ್ಲಿದ್ದಾಗಲೂ, ಸಂಘ ಸಂಸ್ಥೆಗಳ ಸಂಪರ್ಕದಲ್ಲಿ ಪೂರ್ಣ ಪ್ರಮಾಣದಲ್ಲಿದ್ದಾಗಲೂ ಅವರು ಬಡವರಾಗಿದ್ದರು. ಹೃದಯ ಶ್ರೀಮಂತಿಕೆ ಉಳ್ಳವರಾಗಿದ್ದರು. ಕಾರು ಮಾಲೀಕರಾಗಿರಲಿಲ್ಲ. ಬಂಗಲೆಯಲ್ಲಿ ವಾಸ ಮಾಡಲಿಲ್ಲ. ಮಕ್ಕಳಿಗೆ ವಿದ್ಯೆ, ಸಂಸ್ಕೃತಿ ಕಲಿಸಿದರೇ ವಿನಹ ಅವರಿಗಾಗಿ ಏನೂ ಮಾಡಲಿಲ್ಲ. ಸರಳ ಜೀವನ. ಅದರಲ್ಲೇ ತೃಪ್ತಿ. 1976ರಲ್ಲಿ ಬೆಂಗಳೂರಿನಲ್ಲಿ

ಹಮ್ಮಿಕೊಂಡಿದ್ದ ತಮ್ಮ ಅಭಿನಂದನಾ ಸಮಾರಂಭದಲ್ಲಿ ಸಾರ್ವಜನಿಕರು ಕೊಟ್ಟ ಒಂದು ಲಕ್ಷ ರೂ. ಗೌರವ ಧನವನ್ನು ಸ್ಕೌಟ್ ಸಂಸ್ಥೆಗೇ ಕೊಟ್ಟದ್ದು ಎಲ್ಲರಿಗೂ ಮಾದರಿಯಾಗಿದೆ. ಅನೇಕ ರಾಷ್ಟ್ರಗಳಿಗೆ ಭೇಟಿ ನೀಡಿ ಅನುಭವ ಪಡೆದವರಾಗಿದ್ದರು.

ಶ್ರೀ ಮುದೇನೂರು ಸಂಗಣ್ಣನವರು ತಾವು ಸಂಪಾದಿಸಿದ "ಕೊಂಡಜ್ಜಿ ಬಸಪ್ಪ" ಪುಸ್ತಕದಲ್ಲಿ ಶ್ರೀಯುತರ ಹುಟ್ಟಿನಿಂದ ಪ್ರಾರಂಭವಾಗಿ ಅವರು ನಿಧನ ಹೊಂದುವವರೆವಿಗೂ ಅವರು ನಡೆದು ಬಂದ ದಾರಿಯನ್ನು ಎಳೆ ಎಳೆಯಾಗಿ ಬಿಡಿಸಿದ್ದಾರೆ. ಅದೊಂದು ಅಮೂಲ್ಯ ಕೃತಿ.

"ಕೊಂಡಜ್ಜಿ" ಎಂಬ ಹೆಸರಿನಿಂದಲೇ ಕರೆಸಿಕೊಳ್ಳುತ್ತಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರು ರಾಜಕಾರಣಿಗಳಿಗೆ ಮಾದರಿ. ಅವರ ಸರಳತೆ, ಪ್ರಾಮಾಣಿಕತೆ, ಶುದ್ಧತೆ ಆದರ್ಶನೀಯ. ಅಪರೂಪದ, ಅವಿಸ್ಮರಣೀಯ ಚೇತನ. ಶರಣರ ಜೀವನವನ್ನು ಅವರ ಮರಣದಲ್ಲಿ ನೋಡು ಎನ್ನುವಂತೆ ಅವರು ನಿಧನರಾದಾಗ ದಾವಣಗೆರೆಯಲ್ಲಿ ಆಯೋಜಿಸಿದ್ದ ಮೆರವಣಿಗೆ ನಂತರ ಕೊಂಡಜ್ಜಿ ಗ್ರಾಮದಲ್ಲಿ ಅಂತಿಮ ಸಂಸ್ಕಾರದಲ್ಲಿ ಭಾಗವಹಿಸಿದ್ದ ಜನಸ್ತೋಮವೇ ಸಾಕ್ಷಿ.

## BECAUSE I LOVE JESUS

**Once the well known editor and columnist, Khushwant Singh asked her, "Mother, tell me how you brought yourself round to tend people suffering from such loathone disease as leprosy and gangrene? Don't you get a nauseating feeling when you clean up and care for people suffering from dysentry, cholera and such infectious diseases?"**

**The great soul looked firmly into the eyes of the journalist and replied non-chalantly, "I see Jesus inside everyone. I tell myself, this man is a hungry Jesus, I should feed him. The other one is a sick Jesus who is suffering from gangrene, dysentry or cholera. I have to tend him and clean him up. As such, I serve them as I love my Jesus".**

---

## WIFE'S ADVICE

**It is a well-known fact that Edison was a work-addict. He got great pleasure in working hard and constantly. Once, he went inside his laboratory, he would remain there for considerable time. His wife was greatly annoyed with him on this count.**

**One day, the limit was crossed. He had gone into his laboratory and was not coming out. In the end, when he came out, his wife rebuked him, "You are busy in your work for twenty four hours. You must take leave from your work sometime." "But where can I go, if I take leave?" asked Edison. "Wherever you wish to go", replied the wife. "Alright, then I am going there", said Edison and went straight to his laboratory.**

# Kondajji Basappa - Illustrious son of the Bharat Scouts & Guides

M.A. Khalid
*Former International Commissioner (S)*
*Bharath Scouts & Guides, India*
*State Commissioner(S)*
*Bharath Scouts & Guides, Karnataka*



*It is our proud privilege to place on record our deep and abiding admiration for an unique personality for his many sided personality in a perpetual record for future generations in the form of a Book.*

*Though I was not associated actively with Late KONDAJJI BASAPPA, being far junior to him as a volunteer, yet I have observed and heard innumerable incidents about his goodness and simplicity. It would be unfair and would be doing less than justice to him if I do not acknowledge and proclaim his sincerity, dedication and selfless devotion in the service and cause of promoting Scouting and Guiding in our State. It was during his tenure that we gained wide spread Image & Visibility a much needed commodity at that time.*

*By reviving and intensifying the interest of the people at large and influential personalities in particular, in promoting Scouting & Guiding, he had helped considerably to make easy the stupendous task of building up the movement.*

*Many recall with immense gratification the recognition of his stature as a great Scout leader, seeking his counsel and guidance. Many have been constant witnesses to his steadfast adherence to principles and exemplary rectitude and nobility of character so indispensable.*

*His transparent sincerity and deep genuine concern for the Scouting & Guiding movement had touched a chord in every heart and nurtured in everyone an abiding love and reverence, a sense of devotion and loyalty.*

*During my very brief interaction on two occasions viz the 60th Anniversary at St Josephs College grounds in 1977 and the State Jamborette at Sakleshpur in 1978, as I can recall that he noticed that our young Scouts & Guides had to develop a real sense of patriotism. A patriotism that should be intense practical which would be enduring and effective. This according to him ,only a great movement like Scouts v& Guides could achieve. Such were the thoughts of his undying effort in promoting this great movement.*

*It may not be out of place if I indulge in thinking aloud on his relentless and untiring efforts to spread Scouting & Guiding especially to the environs of the then defunct districts.*

*Being the State Chief Commissioner for 18 long years and being a political figure both at central and at state with Ministerial baggage, it was not the "political will" but his possession of "moral and social virtues" which gave him vibrant and dynamic leadership for promotion of the movement in our state which the illustrious and benevolent erstwhile rulers of Mysore State had laid foundation very firmly. He was very much the Head of the big Scouts & Guides family taking every one along. Character rather than capacity, tact rather than authority, sympathy rather than severity was his hallmark to success.*

*We dedicate ourselves and shall always be our endeavour to profit by the ideals of discipline and efficiency that would be imbibed from his illustrious example, so that we may cherish and worthily carry on the traditions which he did so much to build up the movement in our State.*

*I would lastly not hesitate to add that the movement in our state will be a monument to his sincerity, dedication and service.*

# ನೆನಪಿನ ಸುರುಳಿಯಿಂದ



**ಶ್ರೀಮತಿ ಗೀತಾ ನಟರಾಜ್, ಎಲ್.ಟಿ.(ಗೈ)**
**ರಾಜ್ಯ ಆಯುಕ್ತರು (ಗೈಡ್ಸ್), ಕರ್ನಾಟಕ**
**ರಾಷ್ಟ್ರೀಯ ಸಂಸ್ಥೆ ಸ್ಥಾನಿಕ ಆಯುಕ್ತರು (ರೇಂಜರ್ಸ್), ನವದೆಹಲಿ**

ರಾಷ್ಟ್ರದ ಹೆಮ್ಮೆಯ ಕೋಲಾರದ ಚಿನ್ನದ ಗಣಿ, 'ಕೆ.ಜಿ.ಎಫ್.' ಎಂದೇ ಪ್ರಸಿದ್ಧಿ. ಈ ಭೂಮಿಯ ಸತ್ವವೇ ಹಾಗೆ ಸಾಮಾನ್ಯವಾದುದನ್ನು ಬಂಗಾರ (ಚಿನ್ನ)ವನ್ನಾಗಿಸುವ ಶಕ್ತಿ ಇದಕ್ಕಿದೆ ಎಂಬುದು ಅತಿಶಯೋಕ್ತಿಯಲ್ಲ.

ಅಂದಿನ ನೆನಪು ಇಂದಿಗೂ ಹಚ್ಚ ಹಸಿರಾಗಿದೆ. 1980ರ ಇಸವಿಯಲ್ಲಿ ಕೆ.ಜಿ.ಎಫ್‌ನ B.E.M.L. (ಭಾರತ್ ಅರ್ಥ ಮೂವರ್ಸ್ ಲಿಮಿಟೆಡ್)ನಲ್ಲಿ ನನ್ನ ಪತಿ ಶ್ರೀ ಎಮ್.ಎಸ್. ನಟರಾಜ, ಇಂಜಿನಿಯರ್ ಆಗಿದ್ದು, ನಾವು B.E.M.L Colonyಯ Quartersನಲ್ಲಿ ವಾಸವಾಗಿದ್ದೆವು.

ಆ ಒಂದು ದಿನ, ನನ್ನ ಬಾಳಿನಲ್ಲಿ ಸುಮಧುರ ದಿನವೆಂದು ಹೇಳಬಹುದು. ಅಪ್ಪಟ ಚಿನ್ನದಂತಹ ವ್ಯಕ್ತಿತ್ವ ಹೊಂದಿದ, ರಾಜ್ಯ ಸ್ಕೌಟ್–ಗೈಡ್ ಚಳವಳಿಯ ಮುಖ್ಯಸ್ಥರಾಗಿದ್ದ ಪೂಜ್ಯ ಶ್ರೀ ಕೊಂಡಜ್ಜಿ ಬಸಪ್ಪನವರು ನಮ್ಮ ಮನೆಗೆ ಭೇಟಿ ಕೊಟ್ಟದ್ದು, ನೆನಸಿಕೊಂಡರೆ ನನ್ನ ಮನಸ್ಸು ಇಂದಿಗೂ ಪ್ರಪುಲ್ಲಗೊಳ್ಳುತ್ತದೆ. ಶ್ರೇಷ್ಠ ಸೇವಾ ಮನೋಭಾವದ, ರಾಜಕೀಯ ಧುರೀಣರೂ ಆಗಿದ್ದ ಅವರು ನನ್ನ ಬದುಕಿಗೆ ನಿಜವಾದ ಅರ್ಥಕಲ್ಪಿಸುವ ಮಾರ್ಗವನ್ನು ತೋರಿಸಿಕೊಟ್ಟಿದ್ದರು. ನಿರರ್ಥಕವಾಗಿ ಸಾಗಬಹುದಾಗಿದ್ದ ನನ್ನ ಜೀವನವನ್ನು, ಅರ್ಥಪೂರ್ಣ ಗೊಳಿಸುವ ಸುಗಮ ಕ್ಷೇತ್ರವನ್ನು ನನಗೆ ಪರಿಚಯಿಸಿದರು. ಅದೇ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ. ಶ್ರೀ ಬಸಪ್ಪನವರ ಜೊತೆಗೆ ಎಸ್. ಆದಿಕೇಶವಲು, ರಾಜ್ಯ ಸಂಘಟನಾ ಆಯುಕ್ತರು (ಸ್ಕೌ), ಹಮಿದಾ ರೆಹಮಾನ್, ರಾಜ್ಯ ಸಂಘಟನಾ ಆಯುಕ್ತರು (ಗೈ), ಎಸ್. ಪಾಲರಾಜ್. ಜಿಲ್ಲಾ ಕಾರ್ಯದರ್ಶಿ, ಆರ್ಮುಗಂ, ಜಿಲ್ಲಾ ಆಯುಕ್ತರುಗಳೊಂದಿಗೆ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಗೈ) ಆಗಿ ಸೇವೆ ಸಲ್ಲಿಸುತ್ತಿದ್ದ, ಸೋದರಿ ಶ್ರೀಮತಿ ಜಾನಕಿ ವೇಣುಗೋಪಾಲ್ ಕೂಡ ಬಂದಿದ್ದು ಚೆನ್ನಾಗಿ ನೆನಪಿದೆ.

ಪರಿಚಯ, ಆದರಾತಿಥ್ಯ ಮುಗಿಯುತ್ತಿರುವಾಗ, ಶ್ರೀ ಬಸಪ್ಪನವರು ನನ್ನನ್ನು ಕೆ.ಜಿ.ಎಫ್. ಜಿಲ್ಲೆಯ ಗೈಡ್ ವಿಭಾಗದ District Commissioner ಆಗಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸೇರಲು ಆಹ್ವಾನಿಸಿದರು. ಈ ಅನಿರೀಕ್ಷಿತ ಆಹ್ವಾನದಿಂದ ನನಗೆ ಒಮ್ಮೆಗೆ ಆಕಾಶವೇ ಕಳಚಿಬಿದ್ದಂತೆ ದಿಗ್ಭ್ರಮೆ ಆಯಿತು. ತಕ್ಷಣ ಶ್ರೇಷ್ಠ ವಚನಕಾರ ಬಸವಣ್ಣನವರ ನುಡಿ ನೆನಪಾಯ್ತು: "ಬೆಟ್ಟದ ನೆಲ್ಲಕಾಯಿ, ಸಮುದ್ರದೊಳಗಿನ ಉಪ್ಪು, ಎತ್ತಣಿಂದೆತ್ತ ಸಂಬಂಧವಯ್ಯಾ" ಎಂದು. ಯಾಕೆಂದರೆ, ಆ ದಿನಗಳಲ್ಲಿ ನಾನು ಸಾಮಾನ್ಯ ಗೃಹಿಣಿಯಾಗಿ, ನನ್ನ ಮನೆಯ ವಾತಾವರಣದ ಪರಿಸ್ಥಿತಿಯಲ್ಲಿದ್ದು ಹೊರ ಪ್ರಪಂಚದ ಜ್ಞಾನ ವಿಸ್ತಾರದ, ವೈವಿಧ್ಯಮಯ ಕ್ಷೇತ್ರಗಳಲ್ಲಿ ನನ್ನನ್ನು ನಾನು, ತೊಡಗಿಸಿಕೊಂಡಿರಲಿಲ್ಲ. ಜೊತೆಗೆ ಶ್ರೀ ಬಸಪ್ಪನವರು "Commissioner" ಎಂಬ ಶಬ್ದವನ್ನು ಹೇಳಿದ ಕೂಡಲೇ "ನಾನು Commissioner" ಅದು ಹೇಗೆ ಸಾಧ್ಯ? ಎಂಬ ಮರುಪ್ರಶ್ನೆ ನನ್ನಲ್ಲಿ ಹುಟ್ಟಿಕೊಂಡದ್ದಕ್ಕೆ ಕಾರಣ, ಅದುವರೆಗೆ ನನ್ನ ಜ್ಞಾನದ ಪರಿಮಿತಿ ಎಷ್ಟಿತ್ತೆಂದರೆ, ನನ್ನ ಪೂಜ್ಯ ತಂದೆ ಶ್ರೀ ವ್ಹಿ.ಎಸ್. ಹಿರೇಮಠ, ಭಾ.ಆ.ಸೇ ರವರು ವೃತ್ತಿಯಲ್ಲಿ, ಅಂದಿನ ಸರ್ಕಾರಿ ಹುದ್ದೆಯಾದ "ಡೆಪ್ಯೂಟಿ Commissioner" (ಕಲೆಕ್ಟರ್) ಆಗಿದ್ದರು. ಅಯ್ಯೋ... ನಾನು Commissioner! ನನ್ನ ತೀರ್ಥರೂಪ ಅಪ್ಪಾ ಅವರ ಹಾಗೆ ಎಂದು ನನ್ನ ತಲೆಗೆ ಹೊಳೆದದ್ದು ಈಗ ನೆನಸಿಕೊಂಡರೆ ನಗುಬರುತ್ತದೆ.

ಹೀಗೆ, ನಾನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಸೇರಲು ಅನುವಾಯಿತು. "ಕತ್ತಲೆಯಲ್ಲಿರುವವರಿಗೆ ಕೈ ದೀವಿಗೆಯು ಬೆಳಕಾದಂತೆ" ನನ್ನ ಬದುಕಿನಲ್ಲಿ ಹೊಸ ಕಿರಣವೊಂದು ಮೂಡಿ ಬಂದಿತು ಹಾಗೂ ನನ್ನ ಕುಟುಂಬದ ಹಿರಿ–ಕಿರಿಯರ ಸಹಕಾರದೊಂದಿಗೆ ಸೇವೆಗೆ ಮುಡುಪಾಗಿಡುವ ವಿಶ್ವಭಾತೃತ್ವದ ಶಾಂತಿ ಸಂದೇಶದ ಸಂಸ್ಥೆಗೆ ನಿಧಾನವಾಗಿ ನನ್ನನ್ನು ನಾನು ತೊಡಗಿಸಿಕೊಂಡೆ. ನೇರವಾಗಿ ಕೆ.ಜಿ.ಎಫ್. ಜಿಲ್ಲೆಯ ಜಿಲ್ಲಾ ಆಯುಕ್ತರು (ಗೈ) ಆಗಿ ನೇಮಕಗೊಂಡೆ. ನಂತರ ಆಯುಕ್ತರುಗಳ ತರಬೇತಿಯನ್ನು ಪಡೆದುಕೊಂಡೆ. ಆನಂತರದಲ್ಲಿ, ರಾಜ್ಯ ಸಹಾಯಕ ಆಯುಕ್ತರು (ಗೈ) ಹಾಗು ರಾಜ್ಯ ಸ್ಥಾನಿಕ ಆಯುಕ್ತರು (ಗೈ) ಆಗಿ ಸೇವೆ ಮಾಡುತ್ತಾ

ಸಂಸ್ಥೆಯ ಆಡಳಿತ ಕ್ಷೇತ್ರದಲ್ಲಿ ಜಂಟಿ ರಾಜ್ಯ ಕಾರ್ಯದರ್ಶಿ (ಗೈ) ಆಗಿ, ಈಗ ರಾಜ್ಯ ಗೈಡ್ಸ್ ಆಯುಕ್ತೆಯಾಗಿದ್ದೇನೆ. ಜೊತೆಗೆ ಹಂತ, ಹಂತವಾಗಿ, ಗೈಡ್ಸ್ ವಿಭಾಗದ ಮೂಲ ತರಬೇತಿಯಿಂದ ತರಬೇತಿ ನಾಯಕಿಯಾಗಿ (ಎಲ್.ಟಿ. (ಗೈ)) ಕಾರ್ಯನಿರ್ವಹಿಸುತ್ತಾ ಬಂದು 36 ವರ್ಷಗಳಿಂದ ಸತತವಾಗಿ ಈ ಸಂಸ್ಥೆಯಲ್ಲಿ ನನ್ನ ಅಳಿಲು ಸೇವೆಯನ್ನು ಮಾಡುತ್ತಾ ಬಂದಿದ್ದೇನೆ. ನಾನು ಈ ಸಂಸ್ಥೆಯಲ್ಲಿ ಸೇರ್ಪಡೆಯಾದಾಗಿನಿಂದ ನನ್ನ ಕೈಲಾದಷ್ಟು ಸೇವೆಯನ್ನು ಮಾಡಿರುವ ಸಮಾಧಾನ ನನಗಿದೆ.

ಒಂದು ಆಲದಮರವು ತಾನೆಷ್ಟು ವಿಸ್ತಾರವಾಗಿ ಹರಡಿ ಬೆಳೆದರೂ ತನ್ನ ಬಿಳಿಲುಗಳ ಮೂಲಕವೇ ಮತ್ತೆ ಭೂಮಿಯನ್ನು ಸ್ಪರ್ಶಿಸುವಂತೆ, ಪ್ರಾಣಿ ಪಕ್ಷಿಗಳಿಗೆ ಆಶ್ರಯವಾಗುವಂತೆ, ಹಣ್ಣುಗಳು ಜೀವಿಗಳಿಗೆ ಆಹಾರವಾಗುವಂತೆ, ದಾರಿಗರಿಗೆ ನೆರಳಾಗುವಂತೆ, ಪೂಜ್ಯ ಶ್ರೀ ಕೊಂಡಜ್ಜಿ ಬಸಪ್ಪನವರ ಮಾನವೀಯ ಗುಣ. ಮುಖದಲ್ಲಿ ಗಂಭೀರತೆ, ನೇರ ನುಡಿ, ಸರಳತೆ, ಮಾತಿನಲ್ಲಿ ನಿಖರತೆ, ಉತ್ಸಾಹ ತುಂಬುವ ದೃಷ್ಟಿ, ಅಕ್ಕರೆ, ಮಮತೆ, ನಿರ್ಮಲ ಮನಸ್ಸು, ಸದಾ ಹಸನ್ಮುಖ, ನಿರ್ಧಾರದ ಮಾತುಗಳು–ಎಲ್ಲವೂ ಪ್ರಭಾವ ಪೂರಿತವಾದಂತಹವು. ಅವರೊಡನೆ ಒಡನಾಡಿದವರಿಗೆ ಮಾತ್ರ ಅವರ ವ್ಯಕ್ತಿತ್ವದ ಹಿರಿಮೆ ಅರ್ಥವಾಗುವಂತಹದು.

ಕೊಂಡಜ್ಜಿ ಬಸಪ್ಪನವರ ದಿಟ್ಟ ನಿರ್ಧಾರಕ್ಕೆ, ಕೊಂಡಜ್ಜಿಯ ಶಿಬಿರ ಕೇಂದ್ರ ದಾವಣಗೆರೆ ಜಿಲ್ಲೆ ಹಾಗೂ ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ತರಬೇತಿ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಜರುಗುವ ವೈವಿಧ್ಯಮಯ ಕಾರ್ಯಕ್ರಮಗಳು, ಚಟವಟಿಕೆಗಳು, ಲಕ್ಷೋಪಲಕ್ಷ ಮಕ್ಕಳ ಭವಿಷ್ಯತ್ತಿನಲ್ಲಿ ಸವಿ ಮೆಲುಕಾಗಿರುತ್ತವೆ. ಅಲ್ಲಿಯ ಒಂದೊಂದು ಕಣದ ಮಣ್ಣಿನ ಸೊಗಡು ಮಕ್ಕಳ ನವಿರಾದ ಬದುಕಿಗೆ ನಾಂದಿಯಾಗಿಹುದು. ಈ ದಿಶೆಯಲ್ಲಿ ಕೊಂಡಜ್ಜಿ ಬಸಪ್ಪನವರ ಹಿರಿಮೆಯನ್ನು ಎಷ್ಟು ಪ್ರಶಂಸಿಸಿದರೂ ಅಲ್ಪವೆ. ರಾಜಕೀಯದಲ್ಲಿ ಉನ್ನತ ಸ್ಥಾನವನ್ನು ಅಲಂಕರಿಸಿದರೂ, ತಮ್ಮೊಳಗಿನ ಸೇವಾ ಇಚ್ಛಾಶಕ್ತಿಯು ಅವರನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಮುಡುಪಾಗಿರುವಂತೆ ಮಾಡಿತು.

ಮಕ್ಕಳಿಗೆ ಮಾಡಿರುವ ಕೆಲಸ ದೇವರಿಗೆ ಸಮಾನವಾದುದೆನ್ನುತ್ತಾರೆ. ಹಾಗಾಗಿ ಇಂತಹ ಅತ್ಯುತ್ತಮ ಕೆಲಸಕ್ಕೆ ನನ್ನನ್ನು ತೊಡಗಿಸಿಕೊಳ್ಳಲು ಬದ್ಧಳಾಗಿದ್ದೇನೆ. ಜೊತೆಗೆ ನನಗೆ ದೊರೆತ ಎಷ್ಟೋ ಸುವರ್ಣಾವಕಾಶಗಳನ್ನು ನಾನು ಮರೆಯುವಂತೆಯೇ ಇಲ್ಲ. ಬಾಳೆನಾರು ಹೂವಿನೊಂದಿಗೆ ದೇವರ ಸಾನಿಧ್ಯವನ್ನು ಸೇರಿದಂತೆ, ದೇವರಿಗೂ, ದೇಶಕ್ಕೂ, ಜನರಿಗೂ ನನ್ನ ಕರ್ತವ್ಯವನ್ನು ಕೈಗೊಳ್ಳಲು, ಅವಕಾಶ ದೊರೆತಿದ್ದು, ಹಿರಿಯ ಜೀವ ಪೂಜ್ಯ ಬಸಪ್ಪನವರ ಆಶೀರ್ವಾದದಿಂದ. ಅವರಿಗೆ ಪ್ರತಿಕ್ಷಣದಲ್ಲೂ ನನ್ನ ಅಭಿಮಾನದ ಹೃದಯದಾಳದ ಕೃತಜ್ಞತೆಗಳೊಂದಿಗೆ ಕೋಟಿ, ಕೋಟಿ ಗೌರವಪೂರ್ವಕ ನಮನಗಳು.

ಈಗಾಗಲೇ ನಾಡಿನಲ್ಲೆಲ್ಲಾ ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾ ಬಂದು, ಭಾರತದ ರಾಜಧಾನಿ ದೆಹಲಿಯಲ್ಲೂ ಯಶಸ್ವಿಯಾಗಿ ಆಚರಿಸಲಾಗಿದೆ ಎಂದು ತಿಳಿಸಲು ಅತೀವ ಆನಂದವಾಗಿದೆ. ಕನ್ನಡಾಂಬೆಯ ಹೆಮ್ಮೆಯ ಪುತ್ರರಾದ ದಿ॥ ಕೊಂಡಜ್ಜಿ ಬಸಪ್ಪನವರು "ಅಮರ ಜ್ಯೋತಿ"ಯಾಗಿದ್ದಾರೆ, ಅವರ ಜ್ಯೋತಿಯು ಎಲ್ಲೆಡೆ ಪಸರಿಸಲಿ ಎಂದು ಆಶಿಸೋಣ.



*The most worth-while thing is to try to put happiness into the lives of others.*

***- Robert Baden-Powell***

# ಕೊಂಡಜ್ಜಿ ಬಸಪ್ಪ - ಕೆಲವು ನೆನಪುಗಳು

**ಸಿ.ಎಸ್. ರೆಡ್ಡಿ, ಎಲ್.ಟಿ.(ಸ್ಕೌ)**
**ರಾಜ್ಯ ಕಾರ್ಯದರ್ಶಿ**
**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**
**# 252, 'ಎಸ್.ವಿ.ಎಸ್. ನಿಲಯ'**
**ಹಂದೇನಹಳ್ಳಿ, ಸರ್ಜಾಪುರ**
**ಬೆಂಗಳೂರು–562125**



**ನಾನಿಂಥಾ ಊರಿನವರು ಎಂಬ ಹೆಮ್ಮೆ ವ್ಯಕ್ತಿಯದು!**
**ನನ್ನ ಮಡಿಲಲ್ಲಿ ಇಂಥವನು ಬದುಕಿ ಬೆಳಕಾದನು**
**ಎಂಬ ಹಿಗ್ಗು ಆ ಊರಿನದು!**

ಈ ಮಾತು ಕೊಂಡಜ್ಜಿ ಬಸಪ್ಪನವರಿಗೆ ಮಾತ್ರ ಸಲ್ಲುತ್ತದೆ. ಅವರಿಗೆ ಅವರೇ ಸಾಟಿ. ಹೋಲಿಕೆ ಸಲ್ಲ.

ನಾನು ಮುಖ್ಯ ಶಿಕ್ಷಕನಾಗಿ 1976ರಲ್ಲಿ ಪ್ರೀ ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿಗೆ, ಚಿಕ್ಕಮಗಳೂರು ಜಿಲ್ಲೆಯ ಕಡೂರಿನ ಬಳಿ ಇರುವ ಶ್ರೀ ನಿರ್ವಾಣಸ್ವಾಮಿ ಮಠದ ಆವರಣದಲ್ಲಿ ರಾಜ್ಯ ಸಂಸ್ಥೆ ಆಯೋಜಿಸಿದ್ದ ತರಬೇತಿಯಲ್ಲಿ ಭಾಗವಹಿಸಿದ್ದೆ. ಮಠದ ಸುತ್ತ 5 ಗುಡಾರಗಳನ್ನು ಹಾಕಲಾಗಿತ್ತು. ವಿಪರೀತ ಮಳೆ ಪ್ರತಿದಿನ ಯಾವ ಚಟುವಟಿಕೆ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಎಲ್ಲಾ ಪೆಟ್ರೋಲ್‌ಗಳು ಮಠದಲ್ಲಿ ಆಶ್ರಯ ಪಡೆದರು. ಆದರೆ ನನ್ನ ಪೆಟ್ರೋಲ್ ಮಾತ್ರ ಯಾವುದಕ್ಕೂ ಜಗ್ಗದೆ ಗುಡಾರದಲ್ಲಿಯೇ ವಾಸಮಾಡಿತ್ತು. 4 ದಿನದ ನಂತರ ಮಳೆ ಕಡಿಮೆಯಾದರೂ ತುಂತುರು ಮಳೆ ಬೀಳುತ್ತಿತ್ತು. ಆ ಮಳೆಯಲ್ಲಿಯೇ ಶ್ರೀ ಎಂ. ಹಲಗಪ್ಪ, ಶ್ರೀ ಎಸ್. ಪಾಲ್‌ರಾಜ್ ರವರ ನೇತೃತ್ವದಲ್ಲಿ ತೂಗು ಉಯ್ಯಾಲೆ, ಸೇತುವೆಗಳು ಮುಂತಾದ ಅಗ್ರಗಾಮಿತ್ವ ಪ್ರಾಜೆಕ್ಟ್‌ಗಳನ್ನು ಮಾಡಲಾಯಿತು.

ಶ್ರೀ ಕೊಂಡಜ್ಜಿ ಬಸಪ್ಪನವರು ಕುಟುಂಬ ಪರಿವಾರ ಸಮೇತ ಕಡೇದಿನ ಆಗಮಿಸಿ ತೂಗುಉಯ್ಯಾಲೆಯಲ್ಲಿ ಕುಳಿತು ರೋಮಾಂಚನಗೊಳಿಸಿದರು. ನಾವು ಮಾಡಿದ ಪ್ರಾಜೆಕ್ಟ್ ಸಾರ್ಥಕವಾಯಿತೆಂದು ಸಂತೋಷಪಟ್ಟೆವು. ನಂತರ ಪ್ರಾಜೆಕ್ಟ್ ಮಾಡಿದ ನಮ್ಮ ತಂಡದವರನ್ನು, ಪೆಟ್ರೋಲ್ ನಾಯಕನಾದ ನನ್ನನ್ನು ಹುರಿದುಂಬಿಸಿ ಮೆಚ್ಚುಗೆ ವ್ಯಕ್ತಪಡಿಸಿದರು. ಅವರ ಸರಳತೆಗೆ ನಾನು ಮಾರುಹೋದೆ.

1978ರಲ್ಲಿ ರಾಜ್ಯಮಟ್ಟದ ರಾಜ್ಯ ಪುರಸ್ಕಾರ ಶಿಬಿರದಲ್ಲಿ ಶ್ರೀ ಆಂತೋನಿ ಕ್ರೂಜ್‌ರವರ ನಾಯಕತ್ವದಲ್ಲಿ ನಾನು ಶ್ರೀ ಜಿ.ಕೆ. ಹೊಳ್ಳ, ಶ್ರೀ ಶಿವಕುಮಾರ್ ಸಹಾಯಕರು. ನಾವೆಲ್ಲರೂ ಒಂದೇ ಕೊಠಡಿಯಲ್ಲಿ ಇದ್ದೆವು.

ಮುದ್ದುರಾಯಪ್ಪ ಭವನದ ಕೊಠಡಿಯಲ್ಲಿ ಶಿಬಿರಕ್ಕೆ ಸಂಬಂಧಪಟ್ಟ ಸ್ಕೌಟ್/ಗೈಡ್‌ಗಳ ಅರ್ಜಿಗಳನ್ನು ಪರಿಶೀಲಿಸಿ, ಪರೀಕ್ಷೆ ಮಾಡುವುದು ಮುಂತಾದ ಚಟುವಟಿಕೆಯಲ್ಲಿ ಕೊಠಡಿಯನ್ನು ಒಪ್ಪ ಓರಣವಿಲ್ಲದೆ ಇಡಲಾಗಿತ್ತು. ನಾವುಗಳು ಬೆಳಿಗ್ಗೆ 9 ಗಂಟೆಗೆ ತರಬೇತಿ ನೀಡಲು ಹೋದಾಗ ಕೊಂಡಜ್ಜಿ ಬಸಪ್ಪನವರು ನಮ್ಮ ಕೊಠಡಿಗೆ ಗುಂಪು 'ಡಿ' ನೌಕರನನ್ನು ಕರೆದುಕೊಂಡು ಹೋಗಿ ಎಲ್ಲ ವಸ್ತುಗಳನ್ನು ಸರಿಯಾಗಿ ಜೋಡಿಸಿಟ್ಟಿದ್ದರು. ನಾವುಗಳು ನೋಡಿ ಅವರ ಬಳಿ ಹೋಗಿ ವಿಷಾದ ವ್ಯಕ್ತಪಡಿಸಿದಾಗ ಅವರು ಹೇಳಿದ ಮಾತು ನೆನಪಿನಲ್ಲಿ ಇಂದಿಗೂ ಉಳಿದಿದೆ. 'ನಿಮ್ಮ ಕಾರ್ಯಭಾರದ ಒತ್ತಡದಿಂದ ನೀವು ಸರಿಯಾದ ರೀತಿಯಲ್ಲಿ ಕೊಠಡಿಯಲ್ಲಿ ಅರ್ಜಿಗಳನ್ನು ಇಡಲು ಆಗಲಿಲ್ಲ. ಬೇಸರ ಮಾಡಿಕೊಳ್ಳಬೇಡಿ. ಜೀವನದಲ್ಲಿ ಶಿಸ್ತು ಅತಿಮುಖ್ಯ' ಎಂದು ಮುಗುಳುನಗುತ್ತಾ ತಿಳಿಸಿದರು. ಅಂದಿನಿಂದ ಇಂದಿನವರೆಗೂ ನನ್ನ ಜೀವನದಲ್ಲಾಗಲಿ ಎಲ್ಲೇ ಇರಲಿ ಶಿಸ್ತಿಗೆ ಪ್ರಾಮುಖ್ಯತೆ ಕೊಡಲಾಗುತ್ತಿದೆ.

ಒಂದು ದಿನ ಕೊಂಡಜ್ಜಿಯಿಂದ ಶಿಬಿರ ಮುಗಿಸಿಕೊಂಡು ವಾಪಸ್ ಪ್ರಯಾಣಿಸುತ್ತಿದ್ದೆವು. ಎಲ್ಲರೂ ಒಂದೇ ರೈಲಿನ ಎರಡನೆಯ ದರ್ಜೆ ಬೋಗಿಯಲ್ಲಿ ಪ್ರಯಾಣಿಸುತ್ತಿದ್ದೆವು. ಶ್ರೀ ಕೊಂಡಜ್ಜಿ ಬಸಪ್ಪನವರು ತಮ್ಮ ಸಂಗಡ ಒಂದು ತಲೆದಿಂಬು ಒಂದು ಬ್ಯಾಗ್ ಸಮೇತ ಎರಡನೇ ದರ್ಜೆಯಲ್ಲಿ ಪ್ರಯಾಣಿಸುತ್ತಿದ್ದರು. ನಾವುಗಳು ಅವರಲ್ಲಿ ಕೆಳಕಂಡಂತೆ ಮಾತನಾಡಿದೆವು.

* ಸರ್ ತಾವು ಮಂತ್ರಿಗಳಾಗಿದ್ದವರು, ರಾಜ್ಯದ ಮುಖ್ಯ ಆಯುಕ್ತರು, ತಾವು ನಮ್ಮ ಹಾಗೆ ಎರಡನೆ ದರ್ಜೆಯಲ್ಲಿ ಬರುವುದು ಅಷ್ಟು ಸಮಂಜಸವಲ್ಲ.

* ರೆಡ್ಡಿಯವರೇ ನಾವು ಸ್ಕೌಟ್‌ಗಳು, ಯಾರ ಹಣದಲ್ಲಿ ಪ್ರಯಾಣಿಸುತ್ತಿದ್ದೇವೆ. ಬೇರೆಯವರಿಗೆ ಮಾದರಿಯಾಗಬೇಕಾಗಿರುವ ನಾವೇ ದುಂದುವೆಚ್ಚ ಮಾಡಿದರೆ ಹೇಗೆ? ಎಲ್ಲರಂತೆ ನಾನೂ ಒಬ್ಬ. ಹೇಳುವುದೊಂದು ಮಾಡುವುದೊಂದು ಆಗಬಾರದೆಂದು ತಿಳಿಸಿದರು. ನಾವುಗಳು ಅವರ ಸರಳತೆ ಹಾಗೂ ಸಜ್ಜನಿಕೆ ತಲೆಬಾಗಿದೆವು. ಜೀವನದಲ್ಲಿ ಪ್ರತಿಯೊಬ್ಬರು ಸರಳತೆ ಸಜ್ಜನಿಕೆಯನ್ನು ಪಾಲಿಸಿದರೆ ಎಷ್ಟು ಚಂದ!

1975ರಲ್ಲಿ ಸಂಡೂರಿನಲ್ಲಿ ಕರ್ನಾಟಕ ರಾಜ್ಯ ಜಾಂಬೋರೇಟ್ ನಡೆಯಿತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ 80 ಸ್ಕೌಟ್ಸ್/ಗೈಡ್ಸ್‌ಗಳು ಪಾಲ್ಗೊಂಡಿದ್ದೆವು. ಇದು ನನ್ನ ಮೊದಲನೆಯ ಜಾಂಬೋರೇಟ್. ವಿಪರೀತ ಮಳೆ, ತೋರಣಗಲ್ಲು ರೈಲ್ವೆ ನಿಲ್ದಾಣದಲ್ಲಿ ಇಳಿದ ಕೂಡಲೇ ನಮ್ಮ ಜಿಲ್ಲಾ ನಾಯಕರು ಒಂದು ಮೂಲೆಯಲ್ಲಿ ಎಲ್ಲರನ್ನು ಕುಳಿತುಕೊಳ್ಳಿ ಎಂದು ಹೇಳಿ ಉಪ್ಪಿಟ್ಟು ತಯಾರಿಸಿಕೊಟ್ಟರು. ಎಲ್ಲಿ ನೋಡಿದರೂ ಕಿಷ್ಕಿಂದ, ಜಾಗವೇ ಇಲ್ಲ. ಎಲ್ಲಿ ನೋಡಿದರೂ ಸ್ಕೌಟ್/ಗೈಡ್‌ಗಳು ಅಡಿಗೆ ಮಾಡಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಶ್ರೀ ಕೊಂಡಜ್ಜಿ ಬಸಪ್ಪನವರು ಬಂದು ಎಲ್ಲರಿಗೂ ಧೈರ್ಯ ಹೇಳಿ, ಲಾರಿಗಳಲ್ಲಿ ಸಂಡೂರಿಗೆ ರವಾನಿಸಿದರು. ಸಂಡೂರಿನಲ್ಲಿ ಒಂದು ಮಠದ ಆವರಣದಲ್ಲಿ ನಮಗೆ ತಂಗಲು ಮತ್ತು ಅಡಿಗೆ ಮಾಡಿಕೊಳ್ಳಲು ಅವಕಾಶ ಮಾಡಿಕೊಡಲಾಯಿತು. ಮಳೆಯೋ ಮಳೆ, ಜಾಂಬೋರೇಟ್ ಅಂತು ಕೆಸರು ಗದ್ದೆಯಾಗಿತ್ತು. ಕೊಂಡಜ್ಜಿ ಬಸಪ್ಪನವರು ಬಂದು ಎಲ್ಲರನ್ನೂ ವಿಚಾರಿಸಿ ಸಾಂತ್ವನ ಹೇಳಿ ಧೈರ್ಯ ತುಂಬುತ್ತಿದ್ದರು. ಅಂತು ಇಂತು ಜಾಂಬೋರೇಟ್ ಮುಗಿಯಿತು. ನಂತರ ಶ್ರೀ ಘೋರ್ಪಡೆ ಮಹಾರಾಜರ ಅರಮನೆ ಆವರಣದಲ್ಲಿ ಎಲ್ಲರಿಗೂ ಉಪಾಹಾರ ನೀಡಿ ನಂತರ ಲಾರಿಗಳಲ್ಲಿ ತೋರಣಗಲ್ಲು ರೈಲ್ವೆ ನಿಲ್ದಾಣಕ್ಕೆ ಕಳುಹಿಸಿಕೊಟ್ಟರು.

ಅವರ ಮುಗುಳ್ನಗೆ-ಕಾಳಜಿ-ಸರಳತೆ-ಸಜ್ಜನಿಕೆ-ಪ್ರಾಮಾಣಿಕತೆ ಎಲ್ಲರಿಗೂ ಸ್ಫೂರ್ತಿಯನ್ನು ನೀಡಿತು.

---

**"ಮಹಾಕಾರ್ಯಗಳನ್ನು ಮಹಾತ್ಯಾಗದಿಂದಲೇ ಸಾಧಿಸಬೇಕಾಗುತ್ತದೆ. ಮನಸ್ಸಿಗೆ ಬಂದ ಭಾವನೆಗಳಿಗೆ, ಯೋಜನೆಯ ರೂಪ ಕೊಡಿ. ಅದನ್ನು ಕಾರ್ಯಗತಮಾಡಿ. ನನ್ನಯುವಕರೇ! ವೀರಬಾಲಕರೇ! ಪವಿತ್ರಾತ್ಮರೇ! ಉನ್ನತರೇ! ಕಾಯಕ ಚಕ್ರಕ್ಕೆ ಭುಜ ಕೊಡಿ. ಹೆಸರಿಗಾಗಿ, ಖ್ಯಾತಿಗಾಗಿ, ಹಿಂದಿರುಗಿ ನೋಡಬೇಡಿ, ಸ್ವಾರ್ಥವನ್ನು ಬದಿಗೊತ್ತಿ, ಕೆಲಸದಲ್ಲಿ ತೊಡಗಿಸಿ"**

**- ಸ್ವಾಮಿ ವಿವೇಕಾನಂದ**

---

**20ನೆಯ ಶತಮಾನದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆ ಬಂದಿರುವುದು ಶಿಕ್ಷಣ ತಜ್ಞರಿಂದಲ್ಲ; ಸ್ಕೌಟ್ ಚಳವಳಿಯನ್ನು ಸ್ಥಾಪಿಸಿದ ಸಿಪಾಯಿಯಿಂದ.**

**- ಜಾರ್ಜ್ ಬರ್ನಾಡ್ ಷಾ**

# ಸರಳ ಸಜ್ಜನಿಕೆಯ ಕೊಂಡಜ್ಜಿ ಬಸಪ್ಪ

ಜಿ.ಎಸ್. ಉಜ್ಜನಪ್ಪ
ಪತ್ರಿಕೋದ್ಯಮಿ–ಸಮಾಜ ಸೇವಕ
ಚಿತ್ರದುರ್ಗ



1953ನೇ ಇಸವಿಯಲ್ಲಿ ನಾನು ಮರಡಿಹಳ್ಳಿಯ ಜಿಲ್ಲಾ ಬೋರ್ಡ್ ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗ ನಮಗೊಂದು ಹೊಸ ಅನುಭವ ದೊರಕಿತ್ತು. ಅದೇ ವರ್ಷದ ದಸರಾ ರಜೆ ಸಂದರ್ಭದಲ್ಲಿ, ಚಿತ್ರದುರ್ಗ ಸಮೀಪದ ಹುಲ್ಲೂರಿನಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯವರು 15 ದಿನಗಳ ಸಮುದಾಯ ಅಭಿವೃದ್ಧಿ ಶಿಬಿರವನ್ನು (Community Development Camp) ಏರ್ಪಡಿಸಿದ್ದರು. ನಮ್ಮ ಹೈಸ್ಕೂಲಿನಿಂದ 50 ಜನ ವಿದ್ಯಾರ್ಥಿಗಳನ್ನು ಶಿಬಿರಾರ್ಥಿಗಳನ್ನಾಗಿ ಆಯ್ಕೆ ಮಾಡಿದ್ದರು. ಗೊತ್ತಾದ ದಿನ ಸಂಜೆ ನಾವೆಲ್ಲಾ ಚಿತ್ರದುರ್ಗದ ಥಿಯೋಸಾಫಿಕಲ್ ಸೊಸೈಟಿಯನ್ನು ತಲುಪಿದೆವು.

ಸ್ವಲ್ಪ ಹೊತ್ತಿನಲ್ಲೇ ಆಗಿನ ಜಿಲ್ಲಾ ಸ್ಕೌಟ್ ಕಮಿಷನರ್ ಆಗಿದ್ದ ಕೊಂಡಜ್ಜಿ ಬಸಪ್ಪನವರು ಮತ್ತು ಉದ್ದನೆಯ ಕರಿಕೋಟು ಧರಿಸಿದ್ದ ಹುಲ್ಲೂರು ಶ್ರೀನಿವಾಸ ಜೋಯಿಸರು ಆಗಮಿಸಿ ನಮ್ಮನ್ನೆಲ್ಲಾ ಪರಿಚಯಿಸಿಕೊಂಡರು. ಎಡಗೈಯಿಂದ ಕೈಕುಲುಕಬೇಕು ಮತ್ತ ಬಲಹಸ್ತದ ಮೂರು ಬೆರಳುಗಳಿಂದ ಸೆಲ್ಯೂಟ್ ಮಾಡಬೇಕೆಂಬುದನ್ನು ಅವರು ತೋರಿಸಿಕೊಟ್ಟರು. ಕೊಂಡಜ್ಜಿ ಬಸಪ್ಪನವರ ಪ್ರಸನ್ನ ಮುಖ ಕಾಂತಿಯನ್ನು ನೋಡಿ "ಇವರೇನು ವಿದೇಶಿಯರೆ?" ಎಂದು ದಂಗಾಗಿದ್ದೆವು.

ಮಾರನೇ ದಿನ ಬೆಳಿಗ್ಗೆ ಟ್ರಕ್ಕುಗಳಲ್ಲಿ ನಮ್ಮನ್ನೆಲ್ಲಾ ಹುಲ್ಲೂರಿನ ಕೆರೆಯ ಹಿಂದೆ ಇರುವ ಈಶ್ವರ ದೇವಾಲಯದ ಪೌಳಿಗೆ ಕರೆದೊಯ್ಯಲಾಗಿತ್ತು. ಅಲ್ಲಿ ಟೆಂಟುಗಳನ್ನು ರಚಿಸಿಕೊಂಡು ಮರುದಿನದಿಂದ ರಸ್ತೆ ನಿರ್ಮಾಣ, ಅನಂತರ ಹುಲ್ಲೂರಿನ ಪ್ರತಿ ಮನೆಯ ಪಕ್ಕ ಇಂಗು ಗುಂಡಿ ನಿರ್ಮಿಸಿದ ಬಳಿಕ ಸಮೀಪದ ಬೆನಕನಹಳ್ಳಿಯಲ್ಲಿ 15 ಇಂಗು ಗುಂಡಿ ತೋಡಿದ್ದೆವು.

ಸಂಜೆಯ ಶಿಬಿರಾಗ್ನಿ ಕಾರ್ಯಕ್ರಮಗಳಿಗೆ ಮತ್ತು ಮಧ್ಯೆ ಮಧ್ಯೆ ಕಾಮಗಾರಿ ನಡೆಯುತ್ತಿದ್ದ ಸ್ಥಳಗಳಿಗೆ ಕೊಂಡಜ್ಜಿ ಬಸಪ್ಪನವರು ಕೆಲವೊಮ್ಮೆ ಶ್ರೀನಿವಾಸ ಜೋಯಿಷರು ತಪ್ಪದೆ ಹಾಜರಾಗುತ್ತಿದ್ದರು. ಒಂದು ಸಂಜೆ ಚಿತ್ರದುರ್ಗದ ಪ್ರಭಾವಿ ರಾಜಕಾರಣಿ ಎ. ಭೀಮಪ್ಪನಾಯಕರು ಅತಿಥಿಯಾಗಿ ಆಗಮಿಸಿದ್ದರು. ರಾಜ್ಯಮಟ್ಟದ, ಜಿಲ್ಲಾ ಮಟ್ಟದ ಅಧಿಕಾರಿಗಳು, ಇತರ ಅತಿಥಿ ಗಣ್ಯರು ಆಗಮಿಸಿ ಸಂಜೆಯ ಶಿಬಿರಾಗ್ನಿ ಕಾರ್ಯಕ್ರಮಗಳನ್ನು ಸ್ಮರಣೀಯಗೊಳಿಸುತ್ತಿದ್ದರು.

ಜಿಲ್ಲಾ ಸ್ಕೌಟ್ ಕಮಿಷನರ್ ಕೊಂಡಜ್ಜಿ ಬಸಪ್ಪನವರು ಪ್ರತಿ ಸಂಜೆಯೂ ಹಾಜರಿದ್ದು ಕಾರ್ಯಕ್ರಮಗಳು, ಮುಕ್ತಾಯವಾಗಿ ಶಿಬಿರಾರ್ಥಿಗಳಿಗೆ ಊಟ ಬಡಿಸುವ ಸ್ಥಳಕ್ಕೆ ಭೇಟಿ ನೀಡಿ ಪರಾಂಬರಿಸುತ್ತಿದ್ದುದು ಶಿಬಿರಾಧಿಕಾರಿಗಳಾಗಿದ್ದ ಸರ್ಕಾರಿ ಕಾಲೇಜಿನ ರಸಾಯನಶಾಸ್ತ್ರ ಅಧ್ಯಾಪಕರಾಗಿದ್ದ ವೆಂಕಟೇಶ್ ಬೆಂಗಳೂರು ಶೀಗಿಬೇಲಿ ಎನ್. ರಂಗನಾಥ್ ಮುಂತಾದವರಲ್ಲಿ ಕರ್ತವ್ಯ ಪರತೆ ಮತ್ತು ಹುಮ್ಮಸ್ಸು ಮೂಡಿಸುತ್ತಿತ್ತು.

ಅನಂತರ ಹತ್ತು ವರ್ಷದ ಬಳಿಕ ನಾನು 1963ರಲ್ಲಿ ಬೆಂಗಳೂರು ಗಾಂಧಿನಗರದ ಶ್ರೀ ಜಗದ್ಗುರು ಜಯದೇವ ವಿದ್ಯಾರ್ಥಿ ನಿಲಯದಲ್ಲಿದ್ದುಕೊಂಡು ರಾಷ್ಟ್ರೀಯ ಸಾಮಾಜಿಕ ವಿಜ್ಞಾನಗಳ ಸಂಸ್ಥೆ (ರಾಸಾವಿಸಂ)ಯಲ್ಲಿ ಸಾಮಾಜಿಕ ಕಾರ್ಯ (Social Work) ಅಭ್ಯಸಿಸುತ್ತಿದ್ದ ದಿನಗಳಲ್ಲಿ ಶ್ರೀ ಕೊಂಡಜ್ಜಿ ಬಸಪ್ಪನವರ ದ್ವಿತೀಯ ಪುತ್ರ ಕೊಂಡಜ್ಜಿ ಬ. ಷಣ್ಮುಖಪ್ಪನವರ ಪರಿಚಯವಾಗಿತ್ತು. ಇದು ಗಾಢ ಸ್ನೇಹಕ್ಕೆ ತಿರುಗಿ ಷಣ್ಮುಖಪ್ಪನವರ ಅಣ್ಣ ಕೆ.ಬಿ. ರಾಜಶೇಖರ್, ಸಹೋದರರು ಗಳಾದ ಡಾ॥ ಗುರುಮೂರ್ತಿ, ವಿಜಯಕುಮಾರ್, ಲಿಂಗರಾಜು, ಡಾ॥ ಮೋಹನ್ ಮತ್ತು ಕು. ಮಂಜುಳ ಎಲ್ಲರ ಪರಿಚಯವಾಗಿ ಆ ಮನೆಯ ಸ್ನೇಹಿತನಾದೆ. ತಾಯಿ ಶ್ರೀಮತಿ ಸರ್ವಮಂಗಳಮ್ಮ ಅವರ ಪರಿಚಯ ಆದ ನಂತರ ಶ್ರೀ ಕೊಂಡಜ್ಜಿ ಬಸಪ್ಪನವರ ಪರಿಚಯವಾಗಿತ್ತು. ಆಗ ಅವರು ಎಸ್. ನಿಜಲಿಂಗಪ್ಪನವರ ಸಂಪುಟದಲ್ಲಿ ವಾರ್ತಾ ಹಾಗೂ ಅಬಕಾರಿ ಇಲಾಖೆಯ ಉಪಸಚಿವರಾಗಿದ್ದರು. ಕೆಲಕಾಲದ ಬಳಿಕ ಸಹಕಾರ ಉಪಸಚಿವರಾಗಿದ್ದರು.

ಕ್ರೆಸೆಂಟ್ ರಸ್ತೆಯ ಮುಂದಿನ ಬಂಗಲೆಯಲ್ಲಿ ಎಸ್.ಆರ್. ಕಂಠಿಯವರು, ಪಕ್ಕದ ಬಂಗಲೆಯಲ್ಲಿ ಕೊಂಡಜ್ಜಿಯವರ ಕುಟುಂಬ ವಾಸಿಸುತ್ತಿದ್ದವು. ನಮ್ಮ ಸ್ನೇಹ ಎಷ್ಟು ಗಾಢವಾಗಿತ್ತೆಂದರೆ, ವಾರದಲ್ಲಿ ಮೂರು ಬಾರಿಯಾದರೂ ಅವರ ಮನೆಗೆ ಭೇಟಿ ನೀಡುತ್ತಿದ್ದೆ.

ಪಂಚಾಯತ್ ರಾಜ್ ವ್ಯವಸ್ಥೆಯನ್ನು ಸದೃಢಗೊಳಿಸಲು ಹಾಗೂ ಇವುಗಳಲ್ಲಿ ಶಾಸಕರ ಪಾತ್ರವನ್ನು ಸ್ಪಷ್ಟಗೊಳಿಸಲು ಕೊಂಡಜ್ಜಿ ಬಸಪ್ಪನವರ ಅಧ್ಯಕ್ಷತೆಯಲ್ಲಿ ಸರ್ಕಾರ ಒಂದು ಸಮಿತಿಯನ್ನು ನೇಮಿಸಿತ್ತು. ಈ ಸಮಿತಿ ಗುಜರಾತ್ ಮತ್ತು ಪಶ್ಚಿಮ ಬಂಗಾಳ ಮತ್ತಿತರ ರಾಜ್ಯಗಳಲ್ಲಿನ ವ್ಯವಸ್ಥೆಯನ್ನು ಅಭ್ಯಾಸ ಮಾಡಿ ಒಂದು ವರದಿಯನ್ನು ಸಿದ್ಧಪಡಿಸಿತ್ತು. ಇದರ ಸಾಧಕ ಬಾಧಕಗಳನ್ನು ಚರ್ಚಿಸಲು ಶಾಸಕರ ಸಮಿತಿಯನ್ನು ನೇಮಿಸಲಾಗಿದ್ದಿತು. ಆದರೆ ಈ ಸಮಿತಿಯ ಶಿಫಾರಸ್ಸುಗಳು ಜಾರಿಯಾಗದೆ ಅದು ನೆನೆಗುದಿಗೆ ಬಿದ್ದಿತು.

ಕೊಂಡಜ್ಜಿಯವರು 1967ರ ಚುನಾವಣೆಯಲ್ಲಿ ಪುನರಾಯ್ಕೆಗೊಂಡರೂ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ಅನಂತರದ ವೀರೇಂದ್ರ ಪಾಟೀಲರು ಇವರನ್ನು ಸಚಿವ ಸಂಪುಟಕ್ಕೆ ಸೇರಿಸಿಕೊಳ್ಳಲಿಲ್ಲ.

1969ರಲ್ಲಿ ಕಾಂಗ್ರೆಸ್ ಇಬ್ಭಾಗವಾಗಿ ಆಡಳಿತ ಕಾಂಗ್ರೆಸ್‌ನ ಅಧ್ಯಕ್ಷತೆ ಇಂದಿರಾಗಾಂಧಿ ಕರ್ನಾಟಕ ಪ್ರದೇಶ ಕಾಂಗ್ರೆಸ್ಸಿಗೆ ದೇವರಾಜ ಅರಸರನ್ನು ಅಡ್‌ಹಾಕ್ ಅಧ್ಯಕ್ಷರನ್ನಾಗಿ ನೇಮಿಸಿದ ಬಳಿಕ ಇವರು ಚಿತ್ರದುರ್ಗ ಜಿಲ್ಲೆಗೆ ಜಯಪದ್ಮ ಬಸ್ ಮಾಲೀಕರಾಗಿದ್ದ ಕೆ. ರಂಗಪ್ಪನವರನ್ನು ಜಿಲ್ಲಾ ಕಾಂಗ್ರೆಸ್ ಅಡ್‌ಹಾಕ್ ಅಧ್ಯಕ್ಷರನ್ನಾಗಿಸಿದರು. ಇವರು ಕೊಂಡಜ್ಜಿ ಬಸಪ್ಪನವರನ್ನು ತಮ್ಮ ಬಣಕ್ಕೆ ಸೆಳೆಯುವಲ್ಲಿ ಯಶಸ್ವಿಯಾದರು.

ಮುಂದೆ ಇಂದಿರಾಗಾಂಧಿ ಲೋಕಸಭೆಯನ್ನು ವಿಸರ್ಜಿಸಿ 1971ರ ಮಧ್ಯಂತರ ಚುನಾವಣೆಗೆ ಮುಂದಾದಾಗ ಕೊಂಡಜ್ಜಿಯವರು ತಮ್ಮ ವಿಧಾನಸಭಾ ಸದಸ್ಯತ್ವಕ್ಕೆ ರಾಜೀನಾಮೆ ನೀಡಿ ಆಡಳಿತ ಕಾಂಗ್ರೆಸ್ಸಿನಿಂದ ಚಿತ್ರದುರ್ಗ ಲೋಕಸಭಾ ಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿ ಜಯಶಾಲಿಯಾಗಿದ್ದರು. ಈ ಸಂದರ್ಭದಲ್ಲಿ ಡಿಸಿಸಿ ಅಧ್ಯಕ್ಷ 'ಕೆ. ರಂಗಪ್ಪನ ಕಾರು ಕೊಂಡಜ್ಜಿ ಬಸಪ್ಪನ ಟೂರು' ಎಂದು ಜನರಾಡಿಕೊಳ್ಳುವಂತೆ ಕ್ಷೇತ್ರಾದ್ಯಂತ ಪ್ರವಾಸ ಮಾಡಿ ಮತದಾರರ ಒಲವನ್ನು ಗಳಿಸಿ ತಮ್ಮ ಪ್ರತಿಸ್ಪರ್ಧಿ ಜೆ.ಎಂ. ಇಮಾಂರಿಗಿಂತ 1.69 ಲಕ್ಷ ಮತಗಳನ್ನು ಹೆಚ್ಚಿಗೆ ಪಡೆದು ಜಯಶಾಲಿಯಾಗಿದ್ದರು.

1972ರಲ್ಲಿ ಪ್ರಧಾನಿ ಇಂದಿರಾಗಾಂಧಿ ಕೊಂಡಜ್ಜಿ ಬಸಪ್ಪನವರನ್ನು ತಮ್ಮ ಸಚಿವ ಸಂಪುಟಕ್ಕೆ ಸೇರಿಸಿಕೊಂಡು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಖಾತೆಯ ಉಪಮಂತ್ರಿಯನ್ನಾಗಿಸಿಕೊಂಡರು.

ಕೊಂಡಜ್ಜಿಯವರ ಹಿರಿಯ ಮಗ ಕೆ.ಬಿ. ರಾಜಶೇಖರ್‌ರವರ ಲಗ್ನಕ್ಕೆ ವರನ ತಂದೆ, ತಾಯಿ, ಕೆ.ರಂಗಪ್ಪ ಮತ್ತು ಕೊಂಡಜ್ಜಿ ಬ. ಷಣ್ಮುಖಪ್ಪರ ಜತೆ ವಧುವಿನ ಸ್ವಗ್ರಾಮ ಥಣಾಯಕಪುರಕ್ಕೆ ಕೆ. ರಂಗಪ್ಪನವರ ಕಾರಿನಲ್ಲಿ ಪ್ರಯಾಣಿಸಿದ್ದೆ. ಚಿತ್ರದುರ್ಗದಿಂದ ಥಣಾಯಕಪುರ ತಲುಪುವ ತನಕವೂ ಕೊಂಡಜ್ಜಿಯವರು, ಪತ್ನಿ ಸರ್ವಮಂಗಳಮ್ಮ ಮತ್ತು ಕೆ. ರಂಗಪ್ಪ ತಮ್ಮ ಗ್ರಾಮೀಣ ನೆಲೆಯಿಂದ ಸಾಗಿ ಬಂದ ಬದುಕನ್ನು ಸ್ಮರಿಸುತ್ತಾ ನಿಸ್ಪೃಹತೆಗೆ ಸಿಗುವ ಮಾನ್ಯತೆಯನ್ನು ಮೆಚ್ಚಿಕೊಂಡಿದ್ದರು. ಅವರ ಮಕ್ಕಳು, ಷಣ್ಮುಖಪ್ಪ, ವಿಜಯಕುಮಾರ್ ಮತ್ತು ಮಂಜುಳಾರ ಲಗ್ನಗಳಿಗೆ ಹಾಜರಾಗಿದ್ದೇನೆ.

1982ರ ಜೂನ್‌ನಲ್ಲಿ ಕೊಂಡಜ್ಜಿಯವರು ಅನಾರೋಗ್ಯದಿಂದ ದಾವಣಗೆರೆಯ ಬಾಪೂಜಿ ಆಸ್ಪತ್ರೆಗೆ ದಾಖಲಾಗಿದ್ದಾಗ ಸ್ನೇಹಿತರಾದ ಎಚ್. ಹನುಮಂತಪ್ಪನವರ ಸಂಗಡ ಭೇಟಿ ಮಾಡಿದ್ದೆ. ಆಗ ಅವರು ಮಾತಾಡುವ ಸ್ಥಿತಿಯಲ್ಲಿರಲಿಲ್ಲ.

ಸ್ಕೌಟ್ ಚಳುವಳಿಗೆ ತನ್ನನ್ನು ಸಂಪೂರ್ಣ ಅರ್ಪಿಸಿಕೊಂಡು, ಕೊಂಡಜ್ಜಿಯನ್ನು ಗಿರಿಧಾಮವಾಗಿ ಮತ್ತು ಸ್ಕೌಟ್ ತರಬೇತಿ ಕೇಂದ್ರವಾಗಿ ಅಭಿವೃದ್ಧಿಪಡಿಸಿದ್ದ ಚೇತನ ನಿಸ್ತೇಜರಾಗಿದ್ದರು.

ಮುಂದೆ ಅವರು ನಿಧನರಾಗಿ ಕೊಂಡಜ್ಜಿಯ ತರಬೇತಿ ಕೇಂದ್ರದಲ್ಲಿ ಸಮಾಧಿಸ್ಥರಾದಾಗ ಮೂರು ಹಿಡಿ ಮಣ್ಣನ್ನು ಸಮರ್ಪಿಸಿದ್ದೆ. ಇದು ನನ್ನ ಪಾಲಿನ ಪುಣ್ಯವೆಂದೇ ನಾನು ತಿಳಿದಿದ್ದೇನೆ.

**ಸ್ಕೌಟ್ಸ್, ಗೈಡ್ಸ್ ಇದು ಮೂಲತಃ ಚಾರಿತ್ರ್ಯ ಬೆಳೆಸುವ ಚಳವಳಿಯಾಗಿದ್ದು, ನಮ್ಮ ರಾಷ್ಟ್ರದ ಅಷ್ಟೇ ಏಕೆ– ಇಡೀ ಪ್ರಪಂಚದ ಪ್ರಜಾಪ್ರಭುತ್ವ ಸಮಾಜದ ಭಾರವನ್ನು ಹೊರಲು ಹಾಗೂ ನಾವು ಯೋಗ್ಯ ನಾಗರಿಕರಾಗಲು ತರಬೇತಿ ನೀಡುತ್ತದೆ.**

**- ಸಿದ್ಧವನಹಳ್ಳಿ ನಿಜಲಿಂಗಪ್ಪ**

# ಕೊಂಡಜ್ಜಿ ಬಸಪ್ಪನವರ ಸ್ಫೂರ್ತಿ-ಸ್ಕೌಟ್ ಗೈಡ್ ಸಂಸ್ಥೆಗೆ ಕೀರ್ತಿ

ಎಂ.ಎಂ. ಲೋಂಡೆ, ಎಲ್.ಟಿ.(ಸ್ಕೌಟ್ಸ್)
ಜಿಲ್ಲಾ ಮುಖ್ಯ ಆಯುಕ್ತರು, ಧಾರವಾಡ
ರಾಷ್ಟ್ರೀಯ ಸಂಸ್ಥೆ ಕಾರ್ಯಕಾರಿ ಸಮಿತಿ ಸದಸ್ಯರು, ನವದೆಹಲಿ



### ಬದಲಾವಣೆ

1964ರಲ್ಲಿ ಕರ್ನಾಟಕ ರಾಜ್ಯ ಸಂಸ್ಥೆಯ ಪದಾಧಿಕಾರಿಗಳಲ್ಲಿ ಬದಲಾವಣೆಗಳಾಗಿ ಸನ್ಮಾನ್ಯ ಶ್ರೀ ಕೊಂಡಜ್ಜಿ ಬಸಪ್ಪನವರು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ಪ್ರಧಾನ ಆಯುಕ್ತರಾಗಿ ಅಧಿಕಾರ ವಹಿಸಿಕೊಂಡು ಕಾರ್ಯಾರಂಭ ಮಾಡಿದರು.

### ಮಿಶ್ರ ಪ್ರತಿಕ್ರಿಯೆ

ಇವರು ಅಧಿಕಾರ ವಹಿಸಿಕೊಂಡ ಮೇಲೆ ಕೆಲವು ಮಿಶ್ರ ಪ್ರತಿಕ್ರಿಯೆಗಳು ಕೇಳಿಬಂದವು. ಹಿರಿಯ ಸ್ಕೌಟ್-ಗೈಡ್ ಸದಸ್ಯರು. "ರಾಜಕೀಯ ವ್ಯಕ್ತಿಗಳು ಈ ಸಂಸ್ಥೆಗೆ ಬರಬಾರದಾಗಿತ್ತು" ಎಂದು ಉದ್ಗಾರ ತೆಗೆದರು. ಅಲ್ಲಲ್ಲಿ ಚರ್ಚೆಗಳು ನಡೆದವು. ಇದನ್ನೆಲ್ಲಾ ಅರಿತ ಜಾಣ ರಾಜಕಾರಣಿಗಳೂ ಉತ್ತಮ ಸಮಾಜ ಸೇವಕರೂ ಹಾಗೂ ನೈಜ ಸ್ಕೌಟರೂ ಆದ ಶ್ರೀ ಕೊಂಡಜ್ಜಿ ಬಸಪ್ಪನವರು ಎಲ್ಲರ ಮನಸ್ಸನ್ನು ಗೆದ್ದು ಸ್ಕೌಟಿಂಗ್ ಬೆಳವಣಿಗೆಯನ್ನು ಮಾಡಿದರು.

### ಸರ್ವರಿಗೂ ಸಮಾನ ಅವಕಾಶ

ರಾಜ್ಯ ಸಂಸ್ಥೆಯಲ್ಲಿ ಸರ್ವರಿಗೂ ಸಮಾನ ಅವಕಾಶ ಸಿಗಬೇಕೆಂದು ಪ್ರಯತ್ನಿಸುತ್ತ ಸರ್ವ ಕಾರ್ಯಕರ್ತರನ್ನು ಸಮಾನವಾಗಿ ಕಾಣುತ್ತ ಸಂಸ್ಥೆಯ ಪ್ರತಿಷ್ಠೆಯನ್ನು ಬೆಳೆಸುತ್ತ ರಾಜ್ಯದ ಚಟುವಟಿಕೆಗಳಿಗೆ ಪ್ರೇರಣೆ ನೀಡುತ್ತ ಅಲ್ಪ ಸಮಯದಲ್ಲಿ ಸರ್ವರ ಮನಸ್ಸನ್ನು ಗೆಲ್ಲಲು ಪ್ರಯತ್ನಿಸಿದರು.

### ಮಕ್ಕಳ ಚಟುವಟಿಕೆಗಳಿಗೆ ಉತ್ತೇಜನ

ರಾಜ್ಯದ ತುಂಬೆಲ್ಲಾ ಸ್ಕೌಟ್-ಗೈಡ್ ಚಟುವಟಿಕೆಗಳು ಇಡೀ ವರ್ಷ ನಡೆಯಬೇಕು ಮತ್ತು ಅಲ್ಲಿಗೆ ಹೋಗಿ ಸ್ವತಃ ಭಾಗವಹಿಸಿ ಸಂತೋಷಪಟ್ಟು ಎಲ್ಲರಿಗೂ ಉತ್ತೇಜನ ಕೊಟ್ಟು ಬರುವುದು ಅವರ ಕಾರ್ಯಕ್ರಮದ ಮುಖ್ಯ ಭಾಗವಾಗಿತ್ತು.

### ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಗಳಿಗೆ ಉತ್ತೇಜನ

ರಾಜ್ಯದ ಎಲ್ಲ ಜಿಲ್ಲೆಗಳ ಕಾರ್ಯದರ್ಶಿ ಮತ್ತು ಆಯುಕ್ತರುಗಳೊಡನೆ ಸಂಪರ್ಕವಿಟ್ಟು ಆಯಾ ಜಿಲ್ಲೆಗಳ ಅಭಿವೃದ್ಧಿಗಾಗಿ ಆಗಾಗ ವಿಚಾರಿಸಿ ಸಂಬಂಧಿಸಿದ ಅಧಿಕಾರಿಗಳೊಡನೆ ಸಂಪರ್ಕಿಸಿ ಸಹಾಯದ ಹಸ್ತವನ್ನು ನೀಡುತ್ತ ಸಂಸ್ಥೆಗಳ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದರು.

### ರಾಜ್ಯ ಕಾರ್ಯಕಾರಿ ಸಮಿತಿ ಸಭೆ

ರಾಜ್ಯ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಚರ್ಚಿಸಲಿರುವ ವಿಷಯಗಳ ಪಟ್ಟಿ ಪ್ರಕಾರ (ಅಜೆಂಡಾ) ಸಮಾಧಾನದಿಂದ ಎಲ್ಲ ವಿಷಯಗಳನ್ನು ಚರ್ಚಿಸುತ್ತ ಉತ್ತಮ ಸೇವೆ ಸಲ್ಲಿಸಿದವರನ್ನು ಮುಕ್ತಕಂಠದಿಂದ ಪ್ರಶಂಸಿಸುತ್ತ ಹೊಸ ವಿಷಯಗಳನ್ನು ಚರ್ಚೆಗೆ ತೆಗೆದುಕೊಳ್ಳುತ್ತಾ ಸರ್ವರ ಮನಸ್ಸನ್ನು ಗೆಲ್ಲುತ್ತಿದ್ದರು. ಸಭೆಯಲ್ಲಿ ವಿಷಯಕ್ಕನುಗುಣವಾಗಿ ಅರ್ಥಪೂರ್ಣವಾಗಿ ಚರ್ಚಿಸಿ ಸೂಕ್ತ ಪರಿಹಾರ ಸೂಚಿಸುತ್ತ ಭಾಗವಹಿಸುವ ಸದಸ್ಯರನ್ನು ಬಹಳ ಅಭಿಮಾನದಿಂದ ಅವರ ಪ್ರಶಂಸೆ ಮಾಡುತ್ತಿದ್ದರು.

### ಕೊಂಡಜ್ಜಿ ತರಬೇತಿ ಕೇಂದ್ರ

ಕೊಂಡಜ್ಜಿ ಗ್ರಾಮದಲ್ಲಿ ಒಂದು ತರಬೇತಿ ಕೇಂದ್ರವನ್ನು ಸ್ಥಾಪಿಸಬೇಕೆಂದು ಪಣತೊಟ್ಟು ಸರಕಾರದಿಂದ ಜಮೀನು ಪಡೆದು ವಿವಿಧ ಇಲಾಖೆಗಳಿಂದ ಸಹಾಯ ಪಡೆದು ರಾತ್ರಿ ಹಗಲು ಯುದ್ಧೋಪಾದಿಯಲ್ಲಿ ನಡೆದ ಕೆಲಸದಲ್ಲಿ ಭಾಗವಹಿಸಿ ಧೈರ್ಯದಿಂದ, ಸಾಹಸದಿಂದ, ನೂರಾರು ಎಕರೆ ಭೂಮಿಯನ್ನು ತರಬೇತಿ ಕೇಂದ್ರವನ್ನಾಗಿ ಪರಿವರ್ತಿಸಿದ ಪರಿಯನ್ನು ಕಂಡು, ಇದರಲ್ಲಿ ಭಾಗವಹಿಸಿದ ನಾನೂ ಸಹ ಇವರ ಸ್ಫೂರ್ತಿಯನ್ನು ಪಡೆದು ನನ್ನ ಜಿಲ್ಲೆಯಲ್ಲಿ ಪ್ರಯತ್ನ ಮಾಡಲು ಸಾಧ್ಯವಾಯಿತು. ಈಗ ಕೊಂಡಜ್ಜಿ ತರಬೇತಿ ಕೇಂದ್ರವು ಇಡೀ ರಾಜ್ಯದಲ್ಲಿ ಅತ್ಯಂತ ಸುಂದರ ನೈಸರ್ಗಿಕ ಕೇಂದ್ರವಾಗಿ ಅಭಿವೃದ್ಧಿಯಾಗಿದೆ.

## ರಾಜ್ಯ ಮೇಳಗಳು

ನಾಲ್ಕು ವರ್ಷಕ್ಕೊಮ್ಮೆ ಸ್ಕೌಟ್-ಗೈಡ್ ಮೇಳವನ್ನು (ಈಗ ಜಾಂಬೋರೆಟ್) ತಪ್ಪದೇ ಸಂಘಟಿಸುತ್ತಿದ್ದರು. ಅದಕ್ಕಾಗಿ ಸರಕಾರದ ವಿವಿಧ ಇಲಾಖೆಗಳ ಸಹಾಯ ಸಹಕಾರ ಪಡೆದು ಬೇರೆ ಬೇರೆ ಜಿಲ್ಲೆಗಳಲ್ಲಿ ಸಂಘಟಿಸುತ್ತ ಸಾವಿರಾರು ಸ್ಕೌಟ್-ಗೈಡ್ ಮಕ್ಕಳನ್ನು ಶಿಕ್ಷಕರನ್ನು ಒಂದು ವಾರದವರೆಗೆ ಸೇರಿಸಿ ವಿವಿಧ ಚಟುವಟಿಕೆಗಳನ್ನು ಸಂಘಟಿಸಿ ರಾಜ್ಯ ಸಂಸ್ಥೆಯ ಘನತೆ ಗೌರವವನ್ನು ಹೆಚ್ಚಿಸಿದರು ಹಾಗೂ ವಿವಿಧ ಜಿಲ್ಲೆಗಳಿಗೆ ರಾಜ್ಯ ಮಟ್ಟದ ದೊಡ್ಡ ಕಾರ್ಯಕ್ರಮ ಸಂಘಟಿಸುವ ಅವಕಾಶ ನೀಡಿದರು. ಹೀಗೆ ಕೊಡಮಾಡಿದ ಅವಕಾಶದಂತೆ ರಾಜ್ಯ 13ನೇ ಮೇಳವನ್ನು 1972ರಲ್ಲಿ ಧಾರವಾಡ ಜಿಲ್ಲೆಯ ಹುಬ್ಬಳ್ಳಿಯಲ್ಲಿ ಸಂಘಟಿಸುವ ಸೌಭಾಗ್ಯ ನಮ್ಮ ಜಿಲ್ಲೆಗೆ ದೊರೆಯಿತು. ಆರು ಸಾವಿರ ಮಕ್ಕಳು ಭಾಗವಹಿಸಿದರು.

## ಅತ್ಯಂತ ಸಂತೃಪ್ತ ಸ್ಕೌಟ್

ಸಾವಿರಾರು ಸ್ಕೌಟ್-ಗೈಡ್‌ಗಳು ಭಾಗವಹಿಸಿದ ಇಂಥ ಮೇಳಗಳಲ್ಲಿ ಯಾವುದೇ ಚಟುವಟಿಕೆಗಳಲ್ಲಿ ಪ್ರಾರಂಭದಿಂದ ಕೊನೆಯವರೆಗೂ ಅತ್ಯಂತ ಸಂತೃಪ್ತಿ, ಸಂತೋಷ ಮತ್ತು ಸದಾ ಹಸನ್ಮುಖಿಯಾಗಿ ಇಡೀ ಮೇಳದ ತುಂಬೆಲ್ಲಾ ನಡೆಯುತ್ತ ಎಲ್ಲರ ಕ್ಷೇಮ ಸಮಾಚಾರ ವಿಚಾರಿಸುತ್ತ ಯಾವಾಗಲೂ ಯಾವುದೇ ಸಮಯದಲ್ಲೂ ಕಂಡುಬರುವ ಸ್ಕೌಟ್ ಒಬ್ಬರೇ ಒಬ್ಬರು- ಅವರೇ ಶ್ರೀ ಕೊಂಡಜ್ಜಿ ಬಸಪ್ಪನವರು. ಸ್ಕೌಟ್-ಗೈಡ್ ಮಕ್ಕಳೆಂದರೆ ಪಂಚಪ್ರಾಣ.

## ಪ್ರತಿ ಜಿಲ್ಲೆಗೂ ರಾಜ್ಯ ಪದಾಧಿಕಾರಿಗಳ ಸಂದರ್ಶನ

ವರ್ಷಕ್ಕೆ ಎರಡು ಸಲದಂತೆ ಪ್ರತಿ ವರ್ಷ ರಾಜ್ಯ ಪ್ರಧಾನ ಆಯುಕ್ತರು ಜಿಲ್ಲೆಗಳಿಗೆ ಪ್ರವಾಸ ಕೈಕೊಂಡರೆ ಅವರ ಜೊತೆಯಲ್ಲಿ ರಾಜ್ಯ ಪದಾಧಿಕಾರಿಗಳಾದ ರಾಜ್ಯ ಸ್ಕೌಟ್-ಗೈಡ್ ಸಂಘಟನಾ ಆಯುಕ್ತರು, ರಾಜ್ಯ ಸ್ಕೌಟ್-ಗೈಡ್ ತರಬೇತಿ ಆಯುಕ್ತರು ಹಾಗೂ ರಾಜ್ಯ ಸ್ಕೌಟ್ ಗೈಡ್ ಆಯುಕ್ತರು ಇರಲೇಬೇಕು. ಸಂದರ್ಶನಕ್ಕಾಗಿ ಜಿಲ್ಲೆಗಳಿಗೆ ಹೋದಾಗ ಜಿಲ್ಲೆಯ ಸಮಸ್ಯೆಗಳನ್ನು ಪರಿಶೀಲಿಸಿ ಸೂಕ್ತ ಪರಿಹಾರ ಕಂಡುಹಿಡಿಯಲು ಸಂಬಂಧಿಸಿದ ಅಧಿಕಾರಿಗಳನ್ನು ಸಂಪರ್ಕಿಸಿ ಆಯಾ ಜಿಲ್ಲೆಗಳಿಗೆ ಸಹಾಯ ಮಾಡುತ್ತ ಜಿಲ್ಲೆಯ ಪದಾಧಿಕಾರಿಗಳಿಗೆ ಮತ್ತು ಸ್ಕೌಟರ್-ಗೈಡರುಗಳಿಗೆ ಮಾರ್ಗದರ್ಶನ ಕೊಡುತ್ತಿದ್ದ ಮಹಾನ್ ವ್ಯಕ್ತಿ. ಅವರ ಸಂದರ್ಶನದ ದಿನಾಂಕ ನಿಗದಿಯಾದರೆ ಸಾಕು ಜಿಲ್ಲೆಗಳಿಗೆ ಹಬ್ಬವೇ ಹಬ್ಬ. ಅವರನ್ನು ನೋಡಿ ಮಾತನಾಡುವ ಭಾಗ್ಯ ಅವರ ಸಹಾಯ ಪಡೆಯುವ ಸಂದರ್ಭದ ಅವಕಾಶ. ಸಂದರ್ಶನ ಮುಗಿಸಿ ಬೆಂಗಳೂರಿಗೆ ಬಂದ ಮೇಲೆ ಆಯಾ ಜಿಲ್ಲೆಗಳ ಸಮಸ್ಯೆಗಳಿಗೆ ಪರಿಹಾರಾತ್ಮಕ ನಿರ್ಣಯ ಸಿಗುತ್ತಿತ್ತು.

## ಜಿಲ್ಲೆಗಳ ಅಭಿವೃದ್ಧಿ

ಸರಕಾರದ ಸಹಾಯದಿಂದ ಜಿಲ್ಲೆಗಳಿಗೆ ಶಿಬಿರ ನಡೆಸಲು ಹಾಗೂ ಮಕ್ಕಳಿಗೆ ಊಟ ಉಪಹಾರ ವ್ಯವಸ್ಥೆ ಸರಿಯಾಗಲು ರಾಜ್ಯ ಸಂಸ್ಥೆಯಿಂದ ಎಲ್ಲ ಜಿಲ್ಲೆಗಳಿಗೆ ಹಿತ್ತಾಳೆ ಅಡಿಗೆ ಪಾತ್ರೆಗಳನ್ನು, ಎಂಟೆಂಟು ಮಕ್ಕಳಂತೆ ನಾಲ್ಕು ಗುಂಪುಗಳಿಗೆ (ಪ್ಯಾಟ್ರೊಲ್‌ಗಳಿಗೆ) ಅಡಿಗೆ ಪಾತ್ರೆಗಳನ್ನು-ಕರಗಸ, ಕಂದಲಗಳನ್ನು, ನಾಲ್ಕು ಸ್ಟೀಲ್ ಟ್ರಂಕುಗಳನ್ನು, ಜಿಲ್ಲಾ ಸಂಸ್ಥೆಗೊಂದು ಗೋದ್ರೇಜ್ ಅಲಮೆರಾ ಇವುಗಳನ್ನು ಬೆಂಗಳೂರಿನಿಂದ ಎಲ್ಲ ಜಿಲ್ಲೆಗಳಿಗೂ ತಲುಪುವಂತೆ ಲಾರಿ ಮುಖಾಂತರ ಕಳಿಸಿದರು.

## ದಿಲ್ಲಿಯಲ್ಲಿ ಕೇಂದ್ರ ಸರಕಾರದ ಸಚಿವರು, ಬೆಂಗಳೂರಲ್ಲಿ ರಾಜ್ಯ ಪ್ರಧಾನ ಆಯುಕ್ತರು

ರಾಜಕೀಯದಲ್ಲಿ ಅತ್ಯಂತ ಜನಪ್ರಿಯ ರಾಜಕಾರಣಿಗಳಾಗಿ ಎಲ್ಲರ ವಿಶ್ವಾಸಕ್ಕೆ ಪಾತ್ರರಾಗಿ ಯಶಸ್ವಿ ಸಚಿವರಾಗಿ ದಿಲ್ಲಿಯಲ್ಲಿ ಸಕ್ರಿಯವಾಗಿ ರಾಜಕಾರಣದಲ್ಲಿ ಭಾಗವಹಿಸುತ್ತಿದ್ದರೂ ಅವರ ಮನಸ್ಸು ಕರ್ನಾಟಕ ಸ್ಕೌಟ್-ಗೈಡ್‌ಗಳತ್ತ, ಸಂಸ್ಥೆಯ ಪ್ರಗತಿಯತ್ತ, ಮಕ್ಕಳ ಚಟುವಟಿಕೆಗಳತ್ತ ಯಾವತ್ತು ಇರುತ್ತಿತ್ತು. ದಿನಕ್ಕೆ ಸುಮಾರು ಎಂಟು ಹತ್ತು ಸಲ ದಿಲ್ಲಿಯಿಂದ ಬೆಂಗಳೂರಿಗೆ ಫೋನ್, ರಾಜ್ಯ ಪದಾಧಿಕಾರಿಗಳೊಡನೆ ಚರ್ಚೆ, ಎಲ್ಲೆಲ್ಲಿ ಯಾವ ಯಾವ ಕಾರ್ಯಕ್ರಮ ಶಿಬಿರ ಹಾಗೂ ತಕ್ಷಣ ಉತ್ತೇಜನ ಇಷ್ಟು ಇವರ ದಿನಚರಿ.

## ನನ್ನ ಮೇಲೆ ವಿಶೇಷ ಪ್ರೀತಿ ವಿಶ್ವಾಸ

ನಾನು ಚೆನ್ನಾಗಿ ಹಾಡುವವನು, ವಿವಿಧ ಚಟುವಟಿಕೆಗಳನ್ನು ಮಕ್ಕಳಿಗೆ ಕಲಿಸುವವನು, ಶಿಬಿರದಲ್ಲಿ ಮಕ್ಕಳು ಸಂತೋಷದಿಂದ ಇರಲು ಕಲಿಸುವವನು, ನನ್ನ ಜಿಲ್ಲೆಯನ್ನು ಉತ್ತಮವಾಗಿ ಸಂಘಟಿಸುತ್ತ ಬಂದವನು. ಆದ್ದರಿಂದ ಕೊಂಡಜ್ಜಿ ಬಸಪ್ಪನವರು ನನ್ನ ಮೇಲೆ ವಿಶೇಷ ಪ್ರೀತಿ, ವಿಶ್ವಾಸವಿಟ್ಟು ಮಾರ್ಗದರ್ಶನ ಮಾಡಿದರು. ಯಾವುದೇ ಕಾರ್ಯಕ್ರಮವಿರಲಿ "ಲೋಂಡೆ

ಹಾಡು ಮಕ್ಕಳನ್ನು ಕುಣಿಸು, ನಗಿಸು ಎಂದು ಹೇಳಿ ತಾವೂ ಮಕ್ಕಳೊಡನೆ ಅತ್ಯಂತ ಸಂತೋಷದಿಂದ ಹಾಡುವವರು, ಕುಣಿಯುವವರು. ಧಾರವಾಡಕ್ಕೆ ಭೇಟಿ ನೀಡಿದಾಗ ಜಿಲ್ಲೆಯ ಎಲ್ಲ ಚಟುವಟಿಕೆಗಳನ್ನು ನೋಡಿ ಬಹಳ ಸಂತೋಷಪಡುತ್ತಿದ್ದರು. ರಾಜ್ಯ ಕಾರ್ಯಕಾರಿ ಅಥವಾ ವಾರ್ಷಿಕ ಸಭೆಗಳಿದ್ದಾಗ ನಾನು ವಿವಿಧ ವಿಷಯಗಳ ಚರ್ಚೆ ಮಾಡುವ ವಿಧಾನವನ್ನು ಗಮನಿಸಿ ಬಹಳ ಸಂತೋಷದಿಂದ ಹೊಗಳಿ ಉತ್ತೇಜನ ಕೊಡುತ್ತಿದ್ದರು. ಸರ್ವ ಸದಸ್ಯರ ಮಾತಿಗೆ ಬಹಳ ಮಹತ್ವ ಕೊಡುತ್ತಿದ್ದ ಮಹಾನ್ ವ್ಯಕ್ತಿ.

ಧಾರವಾಡ ಜಿಲ್ಲೆಯ ಅಭಿವೃದ್ಧಿ ಹಾಗೂ ಸಸ್ಯ ಚೇತನ ತರಬೇತಿ ಕೇಂದ್ರ

ಕೊಂಡಜ್ಜಿ ಬಸಪ್ಪನವರೊಂದಿಗೆ ದೀರ್ಘ ಸಂಪರ್ಕ ವಿಶ್ವಾಸ, ಮಾರ್ಗದರ್ಶನ, ಧೈರ್ಯ ಪಡೆದುಕೊಂಡ ನಾನು ಧಾರವಾಡ ಜಿಲ್ಲಾ ಸಂಸ್ಥೆಯ ಅಭಿವೃದ್ಧಿಗಾಗಿ ಪಣತೊಟ್ಟು ಕಾರ್ಯ ನಿರ್ವಹಿಸಿದೆನು. ಜಿಲ್ಲಾ ಸಂಸ್ಥೆಗೆ ಒಂದು ಶಾಶ್ವತ ಆರ್ಥಿಕ ಸೌಲಭ್ಯ ದೊರಕಿಸಲು ಹಾಗೂ ಸ್ಕೌಟ್-ಗೈಡ್ ಚಟುವಟಿಕೆಗಳು ಜಿಲ್ಲೆಯಾದ್ಯಂತ ಎಲ್ಲ ತಾಲ್ಲೂಕುಗಳಿಗೆ ಪಸರಿಸಲು ಒಂದು ವಾಣಿಜ್ಯ ಮಳಿಗೆಗಳ ಸಂಕಿರಣವನ್ನು ಅಭಿವೃದ್ಧಿಪಡಿಸಲಾಯಿತು. ಧಾರವಾಡ-ಗೋವಾ ಹೆದ್ದಾರಿಯ ಮೇಲೆ ಎಂಟು ಕಿ.ಮೀ. ದೂರದಲ್ಲಿ 20 ಎಕರೆ ಭೂಮಿ ಪಡೆದು ಜಿಲ್ಲಾ ತರಬೇತಿ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸಲಾಯಿತು. ಈಗ ಇದು ಒಂದು ಉತ್ತಮ ತರಬೇತಿ ಕೇಂದ್ರವಾಗಿ ಬೆಳೆದಿದೆ.

**ಅಪರೂಪದ ವ್ಯಕ್ತಿ**

ಕೊಂಡಜ್ಜಿ ಬಸಪ್ಪನವರು ಒಬ್ಬ ಅಪರೂಪದ ವ್ಯಕ್ತಿ, ಸದಾ ಹಸನ್ಮುಖಿ, ಸ್ಕೌಟ್-ಗೈಡ್ ಸಂಸ್ಥೆಯ ಚಿಂತಕರು, ಸಮಾಜ ಸುಧಾರಕರು, ಸರಳಜೀವಿಗಳು, ಮಹಾನ್ ಸಾಧಕರು, ಇವರಿಗೆ ನಮ್ಮೆಲ್ಲರ ನಮನ– ಅವರ ನೆನಪಿನ ಶಕ್ತಿಯಿಂದ ನಮ್ಮ ರಾಜ್ಯದ ಸ್ಕೌಟ್-ಗೈಡ್ ಸಂಸ್ಥೆ ಪ್ರಗತಿ ಪಥದಲ್ಲಿ ಬೆಳೆಯುತ್ತ ಹೋಗಲಿ ಎಂದು ಪ್ರಾರ್ಥಿಸುತ್ತೇವೆ.

## ನುಡಿದಂತೆ ನಡೆ

**ನುಡಿದರೆ ಮುತ್ತಿನ ಹಾರದಂತಿರಬೇಕು**
**ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು**
**ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು**
**ನುಡಿದರೆ ಲಿಂಗ ಮೆಚ್ಚಿ, 'ಅಹುದಹುದುಹೆ'ನಬೇಕು**
**ನುಡಿಯೊಳಗಾಗಿ ನಡೆಯದಿದ್ದರೆ**
**ಕೂಡಲಸಂಗಮದೇವನೆಂತೊಲಿವನಯ್ಯಾ?**

**- ಬಸವಣ್ಣ**

## ನೀ ಮೊದಲು ತಿದ್ದಿಕೋ

**ಲೋಕದ ಡೊಂಕು ನೀವೇಕೆ ತಿದ್ದುವಿರಿ?**
**ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ.**
**ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ**
**ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ**
**ಕೂಡಲಸಂಗಮದೇವಾ!**

**- ಬಸವಣ್ಣ**

# ನಾ ಕಂಡ ಕೊಂಡಜ್ಜಿ ಬಸಪ್ಪನವರು ಮತ್ತು ಕೊಂಡಜ್ಜಿ



**ರಾ. ಚಂದ್ರಶೇಖರನ್**
ಎಲ್.ಟಿ. (ಕಬ್)
ಮಾಜಿ ರಾಜ್ಯ ಸ್ಥಾನಿಕ ಆಯುಕ್ತರು (ಸ್ಕೌ)
ಪ್ರಕಟಣೆಗಳು

**60** ವರ್ಷಗಳ ಹಿಂದಿನ ಮಾತು. ತುಮಕೂರಿನಲ್ಲಿ ನಡೆದ 10ನೆಯ ಮೈಸೂರು ರಾಜ್ಯ ಜಾಂಬೋರಿಯ ಕಾರ್ಯಾಯದ ವಿಚಾರಣಾ ವಿಭಾಗದ ಸೇವೆಯಲ್ಲಿ ನಿರತನಾಗಿದ್ದೆ. ಆಗ ಆದದ್ದು ನನ್ನ ಮತ್ತು ಶ್ರೀ ಕೊಂಡಜ್ಜಿ ಅವರ ಪರಿಚಯ. ನಾನು B.Sc. (Ag) ವ್ಯಾಸಂಗ ಮುಗಿಸಿ, ಪರೀಕ್ಷಾ ಫಲಿತಾಂಶದ ನಿರೀಕ್ಷೆಯಲ್ಲಿದ್ದೆ. "ಮತ್ತಿನ್ನೇನ್ರೀ, ನಮ್ಮೂರು ಚಿತ್ರದುರ್ಗಕ್ಕೆ ಬಂದ್ಬಿಡಿ ಅಂದ್ರು". ಅದೇದಿನ ಫಲಿತಾಂಶ ಬಂದು ಉತ್ತೀರ್ಣನಾಗಿದ್ದೆ. ಅಲ್ಲಿಂದ 6 ವರ್ಷಗಳ ಬಳಿಕ ಶ್ರೀ ಕೊಂಡಜ್ಜಿ ಬಸಪ್ಪನವರ ಆಶಯವೋ ಎಂಬಂತೆ ಚಿತ್ರದುರ್ಗದಲ್ಲಿ ಸಹಾಯಕ ಕೃಷಿ ಅಧಿಕಾರಿ ಆಗಿ ಸರ್ಕಾರಿ ಉದ್ಯೋಗ ಪ್ರಾರಂಭಿಸಿದೆ. ಅದು ಜೂನ್ 1962ರಲ್ಲಿ ಚಿತ್ರದುರ್ಗದಲ್ಲಿ ನಾನು ನಡೆಸುತ್ತಿದ್ದ ಮುಕ್ತದಳಕ್ಕೆ ಬರಮಾಡಿ ಶ್ರೀ ಕೊಂಡಜ್ಜಿ ಅವರಿಂದ ಹಿತವಚನ ಹೇಳಿಸಿದೆ. ಮಕ್ಕಳಿಗೆ ಸಂತೋಷ ನೀಡುವ ರೀತಿ ಮಾತನಾಡಿದರು. ನನ್ನ ತಂದೆ M.H.R. ಅವರೊಂದಿಗೆ ಅವರನ್ನು ಮನೆಯಲ್ಲೂ ಭೇಟಿ ಮಾಡಿದ್ದೆ. ಮುಂದೆ ಮಾರ್ಚಿ 1963ರಲ್ಲಿ ವರ್ಗಾವಣೆಗೊಂಡು ದಾವಣಗೆರೆಯಲ್ಲಿ ಸಸ್ಯ ತೋಟಗಾರಿಕಾ ಅಧಿಕಾರಿಯಾಗಿ ಕೆಲಸ ಪ್ರಾರಂಭಿಸಿದೆ. 1964–65ರ ಅವಧಿಯಲ್ಲಿ ಕರ್ನಾಟಕ ರಾಜ್ಯದ ಸಹಕಾರಿ ಮಂತ್ರಿಗಳಾಗಿ ದಾವಣಗೆರೆ ಬಂದಾಗಲೆಲ್ಲಾ ಪ್ರವಾಸಿ ಮಂದಿರದಲ್ಲಿ ಭೇಟಿ ಮಾಡುತ್ತಿದ್ದೆ. ಅಲ್ಲದೆ ನಾನು ನಡೆಸುತ್ತಿದ್ದ ದಾವಣಗೆರೆಯಲ್ಲೊಂದು ದಾವಣಗೆರೆ ತಾಲ್ಲೂಕು ನರಗನಹಳ್ಳಿಯಲ್ಲೊಂದು, ಮುಕ್ತದಳಗಳಿಗೆ ಕರೆದೊಯ್ದು ಮಕ್ಕಳಿಗೆ ಹಿತನುಡಿ ಹೇಳಿಸಿದೆ. ನರಗನಹಳ್ಳಿ ಬಳಿಯ ಕರಡಿಗುಡ್ಡ (ರಂಗನಮಟ್ಟಿ) ಪ್ರದೇಶಕ್ಕೊಮ್ಮೆ ಕರೆದೊಯ್ದೆ. ದಾವಣಗೆರೆ ಭೂಮಟ್ಟದಿಂದ 1000 ಅಡಿ ಎತ್ತರದ ಗುಡ್ಡವನ್ನು ಹತ್ತಿಸಿ ಅಲ್ಲಿನ ಚಾರಿತ್ರಿಕ, ಸಸ್ಯ ಮತ್ತು ಪ್ರಾಣಿ ಸಂಪತ್ತು ಇತ್ಯಾದಿ ವಿವರಗಳನ್ನೂ, ಆಧ್ಯಾತ್ಮಿಕ ಚಿಂತನೆಗೆ ಅಂತಹ ಸ್ಥಳದ ಪ್ರಭಾವವನ್ನು ವಿವರಿಸಿದೆ. ಅಲ್ಲಿಗೆ ನಿಲ್ಲದೆ ಜಿಲ್ಲಾ ಕೇಂದ್ರವಾಗಲಿರುವ ದಾವಣಗೆರೆಗೆ ಅಂತಹ ಏಳು ಕೇಂದ್ರಗಳಿಗೆ ಯೋಜನೆ ತಯಾರಿಸಿರುವುದಾಗಿಯೂ ಆ ಏಳರಲ್ಲಿ ಕೊಂಡಜ್ಜಿಯ ಗುಡ್ಡಸಾಲು ಒಂದೆಂದು ತಿಳಿಸಿದೆ. ಡಿಸೆಂಬರ್ 65ರ ವೇಳೆಗೆ ನನಗೆ ವರ್ಗಾವಣೆಯ ಸುದ್ದಿ ತಿಳಿದ ಕಾರಣ ಶ್ರೀ ಕೊಂಡಜ್ಜಿ ಅವರಿಗೆ ತಿಳಿಸಿ, ಕೊಂಡಜ್ಜಿ ಪ್ರದೇಶದ ಇಡೀ ಯೋಜನೆಯ ಪ್ರತಿಯನ್ನು ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಾಲಯಕ್ಕೆ ಹಸ್ತಾಂತರಿಸಿದೆ. ಇದು ಮೊದಲ ಹೆಜ್ಜೆ. ಅಲ್ಲಿಂದ 7 ವರ್ಷ ಕಾಲ ಗುಲ್ಬರ್ಗ, ಕೋಲಾರ, ಯಳಂದೂರು, ಮಾರ್ಕೋನಹಳ್ಳಿ ಮುಂತಾದ ಸ್ಥಳಗಳಲ್ಲಿ ಸೇವೆ ಸಲ್ಲಿಸಿ ಬೆಂಗಳೂರು ಸೇರಿದೆ.

1981ರಲ್ಲಿ ದಕ್ಷಿಣ ಭಾರತ ಅಂತರಾಜ್ಯ ಮಟ್ಟದ ಶಿಬಿರವನ್ನು ಇಂಗ್ಲಿಷ್‌ನಲ್ಲಿ ನಡೆಸಬೇಕಾಗಿ ಬಂದ ಕಾರಣ ನಾನು ಕೊಂಡಜ್ಜಿ ಶಿಬಿರ ಕೇಂದ್ರದಲ್ಲಿ 10 ದಿನ ವಾಸ್ತವ್ಯ ಹೂಡಲು ಬಂದ ಕರೆಗೆ ಓಗೊಟ್ಟೆ. ನನ್ನ ಪ್ರೌಢ ಶಿಬಿರಗಳಲ್ಲಿ ಸೃಜನಶೀಲತೆಯ ಭಾಗವಾಗಿ "ಹಸ್ತಲಿಖಿತ ಪತ್ರಿಕೆ"ಯನ್ನು ಹೊರತರುವುದು ರೂಢಿ. ಹಾಗೆ ಹೊರತಂದ ಪತ್ರಿಕೆಯಲ್ಲಿನ ಒಂದು ಮಲೆಯಾಳಂ ಗೀತೆಯ ಭಾವಾನುವಾದ ಹಾಗೂ ಕೋಲಾಟದ ಪದ, ರಾಜ್ಯ ಮಾಸಪತ್ರಿಕೆಯಲ್ಲಿ ಪ್ರಕಟವಾಯಿತು. ಮತ್ತೆರಡು ಹಾಡುಗಳನ್ನು ನೆನಪಿನ ಮೇಲೆ ಇಲ್ಲಿ ಉಲ್ಲೇಖಿಸಿದ್ದೇನೆ.

**ಬನ್ನಿ ಬನ್ನಿ ಬನ್ನಿ, ಕೊಂಡಜ್ಜಿಗೆ ಬನ್ನಿ ।**
**ಬನ್ನಿ ಬನ್ನಿ ಬನ್ನಿ, ಕೊಂಡಜ್ಜಿಗೆ ಬನ್ನಿ ॥**

**ಮಲ್ಲೇಶ ಗುಡ್ಡವ ಕಂಡಿಹಿರೇನು?**
**ಎಲ್ಲೂ ದೊರಕದ ಸಾಂತ್ವನ ಪಡೆದಿಹಿರೇನು?**
**ಮಲ್ಲಿಕಾರ್ಜುನ ವೈಭವದೈಸಿರಿಯೇನು?**
**ಎಲ್ಲೆಡೆ ಕಾಣುವ ವನಸಿರಿಯೇನು? ॥ 1 ॥**

ಹರಡಿದ ಕೆರೆಯಾ ಅಲೆಗಳ ಆಟ ।
ಅರಿತರೆ ಚಿಂತನರಸದೂಟ ।
ಅಜ್ಜ ಬಸಪ್ಪ ಜನಿಸಿದ ತಾಣಾ ।
ಸ್ಕೌಟ್ ಗೈಡ್‌ಗಳ ಶಿಬಿರವು ಕಾಣಾ ॥ 2 ॥

ನಿರಾಕೃತ ದೇವನ ಕಾಣಲು ಬನ್ನಿ ।
ಸ್ವೀಕೃತ ಪ್ರಸಾದ ನಿಮ್ಮದು ಎನ್ನಿ ।
ಪ್ರಕೃತಿ ರಮ್ಯತೆಯ ಸವಿಯಲು ಬನ್ನಿ ।
ವಿಕೃತ ಭಾವಗಳ ತೊರೆಯಲು ಬನ್ನಿ ॥ 3 ॥

* * *

ದಶಕಗಳೆರಡರ ಹಿಂದೆ । ಗುಡ್ಡಗಳೇರಲು ಬಂದೆ ।
ಮಲ್ಲೇಶ ದರ್ಶನ ಪಡೆಯಲು ಬಂದೆ । ಕಲ್ಲು ಶಾಸನವ ನಾ ಕಂಡೆ ॥
ಎತ್ತ ನೋಡಿದರತ್ತ ಬೋಳು ಗುಡ್ಡಗಳ ಸಾಲು ।
ಕುಡಿಯಲು ನೀರಿಲ್ಲ । ಕೂಡಲು ನೆರಳಿಲ್ಲ ।
ಆಡಲು ಸಮತಟ್ಟು ಬಯಲಿಲ್ಲ ।
ಜನರೇ ಕಾಣದ ರುದ್ರ ಮೌನದ ಬೀಡು ॥

ಮತ್ತಿಂದು ನಾ ಬಂದೆ । ತರಬೇತಿ ನೀಡಲೆಂದೇ ।
ಗುಡ್ಡಗಾಡಿಗೆ ವನಸಿರಿಯ ತೊಡಗು ।
ಅಡ್ಡಾಡಲು ನೀಟು ರಸ್ತೆ ಬೆಡಗು ।
ಆಟಕೆಂದೇ ಸಮತಟ್ಟು ಕವಾಯತು ಬಯಲುಂಟು ।
ಊಟ, ತಿಂಡಿಗಳ ತಯಾರಿಗೆ ಪಾಕಶಾಲೆಯುಂಟು ।
ಬತ್ತಿ, ಬಿರಿದಿದ್ದ ಕೆರೆ ತುಂಬ ನೀರುಂಟು ।
ಮತ್ತದರ ಮೇಲೆ, ತೇಲಿ ಆಡಲು ದೋಣಿಗಳ ಸಾಲುಂಟು ।
ರಾತ್ರಿ ಉಳಿಯಲು ತಂಬುಗಳುಂಟು ।
ಮತ್ತೆ ಕಳೆಕಟ್ಟುವ ಅತಿಥಿಗೃಹಗಳುಂಟು ॥

ಅಜ್ಜ ಬಸಪ್ಪ ಕಾಡು ಮಾಡುವೆನೆಂದ ।
ಬೀಡು ಬಿಡುವೆನೆಂದ । ಅ ಪರ
ಭಗೀರಥನವೋಲ್, ಮಾರುತಿಯ ಅಡಿಯಿಂದ
ಗಿರಿಶಿಖರಗಳ ತುದಿವರೆಗು, ಗಂಗೆಯನು
ಮೇಲ್ತಂದು ಹರಿಸಿಹನಪ್ಪ ।
ದಾಹ ತೀರಿತು । ಹಸಿವಿನ ಬವಣೆ ಹಿಂಗಿತು ।
ಆಡಲು, ಕೂಡಲು, ಕಾಲು ಚಾಚಲು
ಸಕಲ ಸೌಕರ್ಯಗಳಾಯ್ತು ।
ಸ್ಕೌಟ್ ಗೈಡ್ ಕ್ರೀಡೆಗೆಂದೇ, ಈ ತಾಣ ಸಜ್ಜಾಯ್ತು ।
ವರ್ಷಗಳ ಕನಸು ನನಸಾಯ್ತು ॥ *(1981ರಲ್ಲಿ ರಚಿತವಾದದ್ದು)*

ಮತ್ತೆ ನಾಲ್ಕಾರು ಶಿಬಿರಗಳ ಬಳಿಕ 5 ವರ್ಷಗಳುರುಳಿದವು. 1986ರಿಂದೀಚೆಗೆ ಮೂರು ದಶಕಗಳ ಬಳಿಕ, ನನ್ನ ಜೀವನ ಸಂಜೆಯಲ್ಲಿ ಸಕುಟುಂಬ ಕೊಂಡಜ್ಜಿಯಲ್ಲಿ ಒಂದು ದಿನವಾದರೂ ವಾಸ್ತವ್ಯ ಹೂಡಬೇಕೆಂಬ ಬಯಕೆ ಈಡೇರಿದ್ದು 2016 ಜನವರಿಯಲ್ಲಿ. ನನ್ನ ಶ್ರೀಮತಿ ದಾವಣಗೆರೆಯ ಆಧ್ಯಾತ್ಮಿಕ ಸಂಸ್ಥೆಯೊಂದರಲ್ಲಿ 2 ದಿನಗಳು ಉಪನ್ಯಾಸ ನೀಡಲು ಕರೆಬಂತು. ಹಾಗಾಗಿ 02.01.2016 ಮಧ್ಯಾಹ್ನದಿಂದ 03.01.2016 ಮಧ್ಯಾಹ್ನದವರೆಗೆ ಕೊಂಡಜ್ಜಿ ಬಸಪ್ಪ ಶಿಬಿರದ ಕೇಸರೀ ಕುಟೀರದಲ್ಲಿ ತಂಗಿದ್ದೆವು. ಶ್ರೀಮತಿಯವರು ದಾವಣಗೆರೆ ನಗರದಲ್ಲಿ ದಿನಗಳ ಬಹುಭಾಗ ಉಪನ್ಯಾಸಕ್ಕಾಗಿ ಹೋಗಿದ್ದ ಕಾರಣ, ಶಿಬಿರದಲ್ಲಿ ನಾನು ಏಕಾಂತವಾಗಿರುವ ಸುಯೋಗ ಒದಗಿತು. ಆ ದಿವ್ಯಕಾಲದ ಅನುಭವ ಹೀಗಿದೆ:

"ಕೇಸರೀ ಕುಟೀರದ ಮುಂಭಾಗ ಕುಳಿತಿದ್ದೇನೆ. ವೇದಿಕೆಯು ಭೂಮಟ್ಟದಿಂದ 100 ಅಡಿಗಳ ಮೇಲಿದೆ. ಹಿಂಬದಿಯಲ್ಲಿ ಸುಂದರವಾದ ಷೆಲ್‌ಕ್ರೀಟ್ ಟೊಳ್ಳಿಟ್ಟಿಗೆಗಳ ಕುಟೀರವಿದೆ. ಮುಂಭಾಗ ಎತ್ತ ತಿರುಗಿದರೂ, ದಿಗಂತದವರೆಗೂ ಹರಡಿರುವ ಹಸಿರುಡಿಯುಟ್ಟು ಕಂಗಳಿಗೆ ತಂಪೆರೆಯುವ ಭೂಮಾತೆಯ ಐಸಿರಿ. ಉಲಿವ ಹಕ್ಕಿಗಳು ಗಿಳಿವಿಂಡುಗಳ ಮಧುರ ಗಾನ; ಜೀರುಂಡೆಗಳ ಏಕನಾದ; ಗಿಡಮರಗಳ ಎಲೆಗಳ ಮರ ಮರ ಸಪ್ಪಳ; ಕೆಳಗೆ ಹಾಯ್ದ ರಸ್ತೆಯಲ್ಲೊಮ್ಮೆ ಬಂಡೆತ್ತುಗಳ ಕೊರಳು ಗಂಟೆಯ ನಾದ; ಮತ್ತೆ ಆಗಲೋ ಈಗಲೋ ಆಧುನಿಕ ವಾಹನಗಳ ಕರ್ಕಶ ಶಬ್ದ ಇವುಗಳನ್ನು ಉಳಿದು ಮತ್ತೆಲ್ಲವೂ ನೀರವ ಮೌನ. ರಸ್ತೆಯಿಂದ ಮತ್ತೂ ಕೆಳಗೆ ವಿಶಾಲವಾದ ಕೆರೆಯ ನೀರಿನ ಹರವು ವಾಯುವ್ಯಕ್ಕೆ ಮತ್ಸ್ಯ ಕೇಂದ್ರ, ಈಶಾನ್ಯಕ್ಕೆ ದೋಣಿಯ ಮನೆ ಮತ್ತು ಮುಂಗಟ್ಟು. ಕೆರೆಯಲ್ಲಿ ನೀಲಾಕಾಶದ ಪ್ರತಿಬಿಂಬ ಹಾರುವ ಹಕ್ಕಿಗಳ, ಆಗೊಮ್ಮೆ ಈಗೊಮ್ಮೆ ಲೋಹದ ಹಕ್ಕಿಗಳ ಪ್ರತಿಫಲನ. ಮಹಾನಗರ ಮಧ್ಯದ ಕಲುಷಿತ ವಾತಾವರಣ ಹಾಗೂ ಶಬ್ದಮಾಲಿನ್ಯದಿಂದ ದೂರವಾಗಿ, ಪ್ರಕೃತಿ ಸನ್ನಿಧಿಯಲ್ಲಿನ ಈ ಏಕಾಂತತೆ ಅದೆಷ್ಟು ಹಿತಕರವಾಗಿದೆ! ಮನೋಲ್ಲಾಸಭರಿತವಾಗಿದೆ. ಮನೋದ್ವೇಗ ಕಳೆದು, ಮನೋ ದುಗುಡ ಹರಿದು ಮನಶ್ಶಾಂತಿ ಮನೆ ಮಾಡಿದೆ. ಧನ್ಯ! ನಾಧನ್ಯ!!"

ಈ ಎರಡೂ ದಿವ್ಯ ದಿನಗಳು, ದೇವ, ದೇವನರಿವು ಮೂಡಿಸಿ ಧನ್ಯತೆಯ ನೀಡಿದುವು. ಹೀಗಿರಲು ಈವರೆಗಿನ ಐದು ದಶಕಗಳಿಗೂ ಮೀರಿದ ಸುಮಧುರ ಅನುಭವಗಳನ್ನು ಮೆಲುಕು

ಹಾಕಿತು. ವಿಶೇಷವಾಗಿ ಕೊಂಡಜ್ಜಿಯಲ್ಲಿ ದೊರೆತ ದಿವ್ಯಾನುಭೂತಿಗೆ ಕಾರಣರಾದ ಶ್ರೀ ಕೊಂಡಜ್ಜಿಯವರನ್ನು ಮತ್ತೆ ಮತ್ತೆ ನೆನೆಯಿತು.

ನನ್ನ ಮತ್ತು ಶ್ರೀ ಬಸಪ್ಪನವರ ಬಾಂಧವ್ಯ 1956ರಿಂದ ಬೆಳೆಯುತ್ತಲೇ ಹೋಯಿತು. ಆದರೂ ದಾವಣಗೆರೆಯ 1963–66ರ ಅವಧಿಯಲ್ಲಿ ದೃಢಗೊಂಡಿತು. ಸರಳ ಸ್ವಭಾವದ, ನಗುಮೊಗದ, ಹಿಡಿದ ಕೆಲಸ ಮಾಡೇ ತೀರುವೆನೆಂಬ ಛಲದ, ಸಜ್ಜನಿಕೆಯ ವ್ಯಕ್ತಿಯ ಬಂಧುತ್ವ ಮತ್ತೆ ದೊರಕುವುದೆಂದು?

ಶ್ರೀಯುತರು ಸಾಯುಜ್ಯವನ್ನೈದಿದ ಹಿಂದಿನ ದಿನ, ವಿಧಾನಸೌಧ ವಿಭಾಗದ ತೋಟಗಾರಿಕೆಯ ಕೆಲಸ ಕಾರ್ಯಗಳ ಮಧ್ಯೆ ಬಿಡುವು ಮಾಡಿಕೊಂಡು, ಆಸ್ಪತ್ರೆಯಲ್ಲಿ ಅವರನ್ನು ಭೇಟಿ ಮಾಡಿದೆ. ಕೈಹಿಡಿದರು. ಮೌನ ಸಂಭಾಷಣೆ ನಡೆಯಿತು. ಪರಸ್ಪರ ಕೃತಜ್ಞತಾ ವಿನಿಯಮಯದಂತಿತ್ತು. ಸ್ಕೌಟಿಂಗ್ ಬಿಡದೆ ಕಾರ್ಯತತ್ಪರನಾಗಿರು ಎಂಬ ಸಂದೇಶವನ್ನು ನೀಡಿದಂತಿತ್ತು. ಅವರು ಕೈಹಿಡಿದ ಸ್ಪರ್ಶ ಇನ್ನೂ ಹಸಿರಾಗಿದೆ. ಈ ಸೂಕ್ಷ್ಮ ಭಾವನೆಗಳ ಅನುಭವ ಈಗ ನಡೆದಂತಿದೆ. ಮರುದಿನ ಬೆಳಗಿಗೆ ಅವರು ಭಗವಂತನನ್ನು ಸೇರಿದ ಸುದ್ದಿ ಹರಡಿತ್ತು.

ಕಳಬೇಡ ಕೊಲಬೇಡ
ಹುಸಿಯ ನುಡಿಯಲುಬೇಡ
ಮುನಿಯಬೇಡ
ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ
ಇದಿರ ಹಳಿಯಲುಬೇಡ
ಇದೇ ಅಂತರಂಗ ಶುದ್ಧಿ
ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ

- ಬಸವಣ್ಣ

## ತ್ರಿವಿಧ ದಾಸೋಹ ಬೇಕು

ಆಡಿದರೇನು, ಹಾಡಿದರೇನು, ಓದಿದರೇನು
ತ್ರಿವಿಧ ದಾಸೋಹವಿಲ್ಲದನ್ನಕ್ಕ?
ಆಡದೇ ನವಿಲು? ಹಾಡದೇ ತಂತಿ?
ಓದದೇ ಗಿಳಿ?
ಭಕ್ತಿಯಿಲ್ಲದವರನೊಲ್ಲ, ಕೂಡಲಸಂಗಮದೇವಾ!

- ಬಸವಣ್ಣ

# Kondajji Basappa the Architect of Scouting & Guiding in Karnataka and some Reminiscenes



Mohammed Wasil, L.T(S)
President, District Association
Bharat Scouts & Guides, Davanagere

I came to Chitradurga during 1965. It was my good fortune. I was in the midst of the company who were all connected to Scouts and Guides organisation. I was also fortunate to meet Sri Kondajji Basappa who was then the State Chief Commissioner of Scouts and Guides in Karnataka. I was attached to the District Association as a Scout master.

As a man his simplicity was uncomparable. He moved with young as well as old, religious as well as political fraternity. A far sighted diplomat was found free with the young people as well as a adults and old. It was a treat to be with him.

I got some opportunities to be with him which made me to know more about him. He used to visit The District Headquarters and talked about the activities in the district and the state.

He took very much interest in the Sate Level activities. The State Headquarters announced a State rally of Scouts and Guides at Besant Park, Doddaballapura during July 1967. He began to work for the State Rally from the District Head Quarters of Chitradurga as he resided at Chitradurga as well as from State Headquarters from Bangalore. He wanted to make the rally a great success.

The Rally started. On the first day itself, the stormy like rains started, with in half an hour the winds and water brought the tents and shamiyanas down on the ground. Even the kitchens were not spared. The rush of water took all the luggage, clothes, utensils to the low lying areas. Everything was in disorder. The Commissioners and staff of the State Rally were on their heels in carrying the boys and girls with luggage to the schools and public institutions in Doddaballapura. All the five thousand scouts and guides along with luggage were shifted.

This gigantic work was over within three to four hours. The food for the scouts and guides, prepared at the central kitchen was supplied to all the Scouts and Guides camping in the buildings. Sri Kondajji Basappa went to each and every building and comforted the boys and girls with his good feelings. He did not take the food until he satisfied that every child has taken food.

Next morning also food was supplied from central kitchen. At this moment of need the members of Muncipal Council, the Taluk level officers and General public of Doddaballapura were kind enough to help the Scouts and Guides on the request of Sri Kondajji Basappa. He was so kind, so humane, so sympathetic and having duty concious.

Later he shifted his family to Davangere. I too was transfered to Davangere and shifted my family to Davangere. One day Sri Kondajji Basappa met me and asked me to be the Secretary of the District Association of Bharath Scouts and Guides, Davangere. I had to accept it and it was during Feb 1981.

*The same year he decided to hold the State Level Conference of District Commissioners and District Secretaries and Treasurers at Davangere. Hence, the District Association started preparations for the Commissioners and Secretaries conference at Davangere. He took keen interest to make the conference a grand success. Along with the District Association office bearers he moved in and around Davangere city. All the available guest houses were booked for the stay of the participants. Rajanahally Hanumanthappa Choultri was the place of venue for the conference.*

*It was a three day affair. The Ministers of Govt of Karnataka were invited for the Inuaguration and Valedictory. 150 members attended the conference. During this period he used to meet the members of Association meticulously for making proper arrangements.*

*I could remember that his planning arrangements made for functions, food, lodging and doing everything meticulously was superb. Like this, he trained the personnel of Scouts and Guides in all the above aspects.*

*During the gatherings of the organisation he used to ask the Scouts and Guides who is your State Chief Commissioner and he would get the mixed or missed reply and he would enjoy their reply.*

*At Raichur State Rally on the last day of the Rally the Officials were distributing the travelling expenses to the staff, he joined the queue and received the cash. This shows his humbleness and the sense of equality.*

*He used to visit the districts. In a way of his own he used to extract the information without hurting the feelings.*

*He used to meet the Commissioners and the Scouters and Guiders in the training centres, at the gatherings smilingly, joyfully and never hurt the person he met.*

*During the month of April 1982, we had a Taluk Rally at Jagalur (Davangere District) and we invited him to bless the Scouts and Guides. He attended the function in the evening. After taking food he wanted to return to Davangere. We requested him to stay back at Jagalur but he didn't agree.*

*He returned to Davangere. I was told that next day he felt cold and he had a stroke of paralysis. He was admitted to Chigateri Hospital. In the Hospital also he used to meet friends and relatives. I used to meet him in Hospital. One day he called me and told that Dr. Nirmala Kesaree has received some guest from USA. I have requested him for donation to Scout Movement here and to get him a letter.*

*The letter was prepared and I gave the letter to Kondajji Basappa and he delivered the letter through Dr.Nirmala Kesaree who was the Vice -President of our District Association.*

*I received an envolope addressed to District Secretary during Feb 1983 after his demise. I opened the letter and surprised to find a cheque for 1000/- USA Dollors with a letter to Kondajji Basappa. The amount of Rs 10,000 was collected by the District Association and later on it was used for a better purpose. This shows his commitment and devotion for the Scouts and Guides.*

*Kondajji Basappa was taken to Bengaluru for treatment and admitted to ward at Jayadeva Institute of Cardiology. He was getting the treatment there every body was satisfied . It was on Nov 14, 1982 In the morning there was a Radio*

*News that Kondajji Basappa was no more. His sad demise brought everybody to tears. We at Davangere received a communication from the State Head Quarters that his mortal remains would be brought to Davangere and would be kept for Darshan at the Scout Headquarters for some time and then taken to Kondajji for burial at Scouts and Guides Training Centre.*

*The State officials came early for making arragements. His mortal remaines arrived at Davangere round about 4.00 PM. The body kept for darshan, then again it was taken in procession to Harihar and after wards to Kondajji. The procession arrived at the camp at midnight preparation were already made for burial. Everything over around 2.00 AM on 15th November, 1982.*

*The Samadhi is at the entrance to the Scouts and Guides camp. The inscription on the stone is.*

***1915 - Born, 1982 -Demise***

*The great Soul who achieved more wishes fulfilled, but some wishes to be fulfilled, may his soul be in peace.*

*He has left for the Scouts and Guides of the State of Karnataka a beautiful camp site where thousands of children are getting the training alround the year.*

*Now it has become an international camp with equipment and facilities like lake, greenary, place for adventure courses and water activities, Trekking camps with an area of eighty acres.*

In the last issue of the magazine we felicitated our State Chief Commissioner Sri Kondajji Basappa on his being honoured by the State Government on the recent Rajyothsava Day. It is very distressing to think that we should now have the sad duty of announcing in the very next issue his passing away from our midst. Inscrutable are the ways of destiny. We fervently hoped that he would recover fully from his illness and return to us in perfect health to carry on the work of the Movement which was always so dear to him, but fate willed it otherwise.

In a moment of crisis it is but natural that we should be filled with grief at his final departure from us. Human nature being so emotional and its understanding so much limited, it is only 'Time' that can heal the wound and sooner or later we should return to the tasks which still remain to be finished. It is a challenge that we must accept, because it is the most appropriate way we can build a memorial worthy of ourselves and of the leader who has gone ahead of us. May God help us to draw inspiration from the memory of a man who was to all of us such a greatly respected colleague and friend.

**From Scout Guide Monthly Magzine, December 1982**

# Immortal Kondajji Basappa, A Centenary Tribute

Dr. M.G. Rajasekharappa
Director (Administration), JJM Medical College
Davanagere-577004

*It is given to very few to be a legend in one's own life time and earn universal affection and reverence. Sri. Kondajji Basappa whose birth centenary will be observed this December 2015, is undoubtedly one such. Born on December 11, 1915 in Kondajji village of Harihar Taluk, he started practice in 1941 at Davangere. I was a student in Government High School Davangere when I had an opportunity to meet him. He was tall, golden glowing round face, shining eyes, bright teeth row, mellowed voice, soft behavior, enlightened talk, workmanship, simple life were the qualities that anyone could find in him. His appearance in any apparel in public and Scout uniform was majestic.*

*He was my mentor and god-father throughout my studies from High School to Post-graduate study in medicine and later in my profession. I was stupid to Denial of relation of him at the time of my interview for admission to MBBS course at Mysore Medical College, Mysore in 1955 where in he was one of the member of selection committee. For that stupid act of mine Mr.M.P.L.Shastry, member of the selection committee bombarded me on the spot and later my relatives in Davangere. The great person whom I adore never raised that issue with me. He very silently pardoned. Another occasion during his visit to Davangere when he was central health minister, when I visited him he welcomed me calling come come professor, I was embarrassed. Later he counselled me, if I do not give importance to you in the huge gathering how can you expect the respect from others? This was a lesson to me how to behave with public. It was quite natural for him to address everyone in plural.*

*Law practice alone could not contain his diverse talents and interests. He was active in public life and in .people's movement. He was President of Chitradurga District Board in 1946. He gave importance to education, health care and infrastructure development in the district. He opened High schools and hospitals in all the taluk head quarters. He was awarded gold medal for his social services by his highness the Maharaja of Mysore in 1948. His services in the field of social, public, co-operative, education and in particular Karnataka Scouts & Guides movement for four decades is laudable. He has done memorable service to Bharath Scouts and Guides of Karnataka at various levels as Assistant District Commissioner of Davangere, District Commissioner of Chitradurga, State Secretary and as State Chief Commissioner of Karnataka Scouts and Guides from 1964 to 1982. He visited Austria, Italy, Switzerland, Germany, France, Britain, Belgium and Denmark and gained wealth of information of Scouts and Guides. He represented India at the 7th World Jambooree held in Salsbergh in Austria during 1951. He participated as India's representative at Nairobi conference. He developed Scouts centre at Kondajji village. Karnataka State Award was conferred on him for his services to Bharath Scouts and Guides in 1982.*

*As a Legislator and Parliament member and then as a minister in the state and center he did splendid work. He represented India at Manila in the International conference on Family Planning. He headed many study committees on Handloom, Sheep & Wool, State Warehouse, Bharth Sevak Samaj and Panchayat Raj. He made a remarkable contribution in these fields. For the benefit of Agriculturists,he started Agricultural Industrial & Commercial Co-Operative Society in 1951 at Davangere. He was on the administrative board of Mysore University, Mysore and Agricultural University, Bangalore.*

*A multi-faceted personality with signal achievement his eminence as man of social service and a public figure was matched by his great compassion and empathy which were his soul mate. All his work was permeated by these sterling qualities. A perfect gentleman. His innate generosity and warmth would scorch any trace of malice and meanness. His 40 years of public service saw him rise to greater heights passionately expounding public causes. He was greater than his deeds and truer than his surroundings. It is now about 33 years since he left the mortal plane. Oh! For a touch of vanished hand.*

*It is but natural that we remember and salute him with great respect on his birth centenary. The love and respect with which we light his memory and record our gratitude for a life to which we owe so much is a measure of his magnificent contribution to social life and love for mankind.*

---

**"No need for us to get depressed over temporary setbacks or disappointments; these are bound to come from time to time. They are the salt that savours our progress; Let us rise above them and look to the big import of what we are at".**

**- LORD BADEN POWELL**

---

**"One of the first duties of a Scout is obedience to authority. He must obey his orders in the first place and put his own amusement or desires in the second".**

**- ROBERT BADEN POWELL**

# ನಾನು ಕಂಡ ಕೊಂಡಜ್ಜಿ

**ಕೆ. ರಂಗಪ್ಪ**
**ಮಾಜಿ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು**
**ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರು**
**ಚಿತ್ರದುರ್ಗ**

**ಕೊಂ**ಡಜ್ಜಿ ಗ್ರಾಮದಲ್ಲಿ ಜನ್ಮತಾಳಿದುದರಿಂದ ಶ್ರೀ ಬಸಪ್ಪನವರು ಕೊಂಡಜ್ಜಿ ಬಸಪ್ಪನವರಾದರು. ಈಗ ಬಸಪ್ಪ ಎಂಬ ಹೆಸರು ಹಿಂದೆ ಬಿದ್ದು ಸಾಮಾನ್ಯವಾಗಿ ಕೊಂಡಜ್ಜಿ ಎಂದು ಕರೆಯುವುದೇ ಅಭ್ಯಾಸವಾಗಿದೆ.

ನನ್ನ ಮತ್ತು ಕೊಂಡಜ್ಜಿಯವರ ಹೆಚ್ಚಿನ ಪರಿಚಯ ರಾಜಕೀಯವಾಗಿ 1944ರ ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ. ಅವರು ಹರಿಹರ ತಾಲ್ಲೂಕಿನಿಂದ ಸ್ಪರ್ಧಿಸಿದ್ದರು; ನಾನು ಹೊಳಲ್ಕೆರೆ ತಾಲ್ಲೂಕಿನಿಂದ ಸ್ಪರ್ಧಿಸಿದ್ದೆ. ಅಲ್ಲಿಂದಲೂ ಸಹ ಇಬ್ಬರೂ ಆತ್ಮೀಯ ಸ್ನೇಹಿತರಾಗಿ ಸುಖ-ದುಃಖದಲ್ಲಿ ಒಟ್ಟಾಗಿ ಬೆಳೆದುಕೊಂಡು ಬಂದಿದ್ದೇವೆ.

1952ರಿಂದ 1962ರವರೆಗೆ ಅವರಿಗೆ ವಿಧಾನಸಭೆಗೆ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಲು ಅವಕಾಶ ಸಿಗಲಿಲ್ಲ. ಆದರೂ ಸಹ ನಿರಾಶರಾಗದೆ ವಿಧಾನಸಭೆ, ಲೋಕಸಭೆ ಚುನಾವಣೆಯಲ್ಲಿ ಪಕ್ಷದ ವಿಜಯಕ್ಕೆ ಕಾರಣರಾದರು.

1956ನೇ ಜೂನ್ ತಿಂಗಳಲ್ಲಿ ನಾನು ವಿಧಾನಪರಿಷತ್ತಿಗೆ ಚಿತ್ರದುರ್ಗ ಜಿಲ್ಲೆಯಿಂದ ಕಾಂಗ್ರೆಸ್ ಪರವಾಗಿ ಸ್ಪರ್ಧಿಸಿದಾಗ ಅಹೋರಾತ್ರಿ ಪಕ್ಷದ ಜಯಕ್ಕಾಗಿ ಕೆಲಸ ಮಾಡಿದರು. ಜಿಲ್ಲಾ ಬೋರ್ಡ್ ಅಧ್ಯಕ್ಷರಾದ ಮೇಲೆ ಅವರ ಕಾರ್ಯಕ್ಷೇತ್ರ ವಿಶಾಲವಾಗಿ ದಾವಣಗೆರೆಯಿಂದ, ಚಿತ್ರದುರ್ಗಕ್ಕೆ ಬಂದು ನೆಲೆಸಿದರು. ಚಿತ್ರದುರ್ಗ ಜಿಲ್ಲೆಯಲ್ಲಿ ಹಾಗೂ ನಗರದಲ್ಲಿ ಅವರು ಸಾರ್ವಜನಿಕ ಕ್ಷೇತ್ರಗಳಲ್ಲಿ ಮಾಡಿರುವ ಕೆಲಸಗಳು ಚಿರಸ್ಥಾಯಿಯಾಗಿವೆ. ಜಿಲ್ಲಾ ಆಸ್ಪತ್ರೆಯ ಕಟ್ಟಡ, ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡಗಳು, ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಾಪಿಸಿರುವ ಆಸ್ಪತ್ರೆ. ಪ್ರೌಢಶಾಲೆಗಳು ಇವೆಲ್ಲಾ ಪ್ರಾಮುಖ್ಯವಾಗಿವೆ. ವಿಶ್ವವಿದ್ಯಾನಿಲಯ ಸೆನೆಟ್, ಸಿಂಡಿಕೇಟ್ ಮುಂತಾದ ಸಮಿತಿಗಳಲ್ಲಿ ಕೆಲಸ ಮಾಡಿರುತ್ತಾರೆ.

1962ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ದಾವಣಗೆರೆ ಕ್ಷೇತ್ರದಿಂದ ಕಾಂಗ್ರೆಸ್ ಪರವಾಗಿ ವಿಧಾನಸಭೆಗೆ ಸ್ಪರ್ಧಿಸಿ ಬಹುಮತದಿಂದ ಚುನಾಯಿತರಾಗಿ ಶ್ರೀ ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಉಪಸಚಿವರಾಗಿ ದಕ್ಷತೆಯಿಂದ ಕೆಲಸ ಮಾಡಿದರು. ಸ್ಥಳೀಯ ಸಂಸ್ಥೆಗಳ ಪುನರ್‌ರಚನೆ ವಿಚಾರವಾಗಿ ರಚಿತವಾದ ಸಮಿತಿಯ ಅಧ್ಯಕ್ಷರಾಗಿ ಅವರು ಸರ್ಕಾರಕ್ಕೆ ಒಪ್ಪಿಸಿರುವ ವರದಿಯು ಅತ್ಯಂತ ಮಹತ್ವವಾದ ವರದಿಯಾಗಿದೆ.

### ಮಹತ್ತರ ಬದಲಾವಣೆ

ಸ್ವತಂತ್ರ ಭಾರತದ ಇತಿಹಾಸದಲ್ಲಿ ಚರಿತ್ರಾರ್ಹವಾದ ಬದಲಾವಣೆಯೆಂದರೆ ಕಾಂಗ್ರೆಸ್ ಪಕ್ಷವು ಇಬ್ಭಾಗವಾದುದು. ಆಗಿನ ಸಮಯದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಆಡಳಿತ ಕಾಂಗ್ರೆಸ್ ಪಕ್ಷವನ್ನು ನೆಲೆಗೊಳಿಸಿ ಬಲಗೊಳಿಸಲು, ಶ್ರೀಯುತರು ವಹಿಸಿದ ಶ್ರಮ ಮಹತ್ತರವಾದುದು. ದಾವಣಗೆರೆಯಿಂದ ವಿಶೇಷ ರೈಲಿನಲ್ಲಿ ಚಿತ್ರದುರ್ಗ ಜಿಲ್ಲೆಯ ಸಹಸ್ರಾರು ಕಾರ್ಯಕರ್ತರನ್ನು ಬೊಂಬಾಯಿಗೆ ಕರೆದೊಯ್ದು, ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರನ್ನು ಭೇಟಿ ಮಾಡಿಸಿದರು. ಬೊಂಬಾಯಿಯಲ್ಲಿ ಕರ್ನಾಟಕದ ಪರವಾಗಿ ಪ್ರಥಮ ಸ್ವಾಗತ ಕೋರಿದ ಅಭಿಮಾನ ಚಿತ್ರದುರ್ಗ ಜಿಲ್ಲೆಯದು. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷನಾಗಿ ಜಿಲ್ಲೆಯ ಪರವಾಗಿ ಪ್ರಧಾನಿಯವರಿಗೆ ಪುಷ್ಪ ಹಾರ ಅರ್ಪಿಸಲು ನನಗೆ ಪ್ರಥಮ ಅವಕಾಶ ಸಿಕ್ಕಿದ್ದು ಶ್ರೀ ಕೊಂಡಜ್ಜಿ ಬಸಪ್ಪ ಅವರಿಂದ.

ನಂತರ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಗಳಾಗಿ ಅಧಿಕಾರ ವಹಿಸಿಕೊಂಡು ರಾಜ್ಯಾದ್ಯಂತ ಬಿರುಸಿನ ಪ್ರವಾಸ ಕೈಗೊಂಡು ಆಡಳಿತ ಕಾಂಗ್ರೆಸ್ಸನ್ನು ಬೆಳೆಸಲು ಪ್ರಯತ್ನ ಮಾಡಿ, ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಬಾಬು ಜಗಜೀವನರಾಮ್ ಅವರು ಮತ್ತು ಪ್ರಧಾನಿ ಶ್ರೀಮತಿ ಇಂದಿರಾಜಿಯವರ ಪ್ರವಾಸವನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ಬಹಳ ಯಶಸ್ವಿಯಾಗಿ ನಡೆಸಿದರು.

**ಲೋಕಸಭೆ ಸದಸ್ಯರಾಗಿ ಆಯ್ಕೆ**

1970ರ ಡಿಸೆಂಬರ್‌ನ ಅಂತ್ಯದಲ್ಲಿ ಲೋಕಸಭೆ ವಿಸರ್ಜನೆಯಾಗಿ ನೂತನ ಚುನಾವಣೆ ನಡೆಯಿತು. ಚಿತ್ರದುರ್ಗ ಕ್ಷೇತ್ರದಿಂದ ಶ್ರೀ ಕೊಂಡಜ್ಜಿ ಬಸಪ್ಪನವರು ಆಡಳಿತ ಪಕ್ಷದ ಉಮೇದುವಾರರು. ವಿರೋಧ ಪಕ್ಷಗಳೆಲ್ಲವೂ ಒಟ್ಟಾಗಿ (ಸಂಸ್ಥಾ ಕಾಂಗ್ರೆಸ್, ಪಿ.ಎಸ್.ಪಿ., ಎಸ್.ಪಿ., ಜನಸಂಘ, ಸ್ವತಂತ್ರ ಪಕ್ಷ, ಮುಸ್ಲೀಮ್ ಲೀಗ್ ಮತ್ತು ಸಿ.ಪಿ.ಎಂ. ಇತರ ರಾಜಕೀಯ ಪಕ್ಷಗಳು) ಜಗಲೂರು ಶ್ರೀ ಇಮಾಂ ಸಾಹೇಬರನ್ನು ಎದುರಾಳಿಯಾಗಿ ನಿಲ್ಲಿಸಿದವು. ಶ್ರೀ ಇಮಾಂ ಅವರು ಸಹ ಜಿಲ್ಲೆಯ ಸುಪರಿಚಿತರು. ಸಚಿವರಾಗಿ, ಲೋಕಸಭೆ ಸದಸ್ಯರಾಗಿ ಸೇವೆ ಸಲ್ಲಿಸಿದ್ದವರು. ಇಂತಹ ಪರಿಸ್ಥಿತಿಯಲ್ಲಿ ಒಂದು ಲಕ್ಷ ಐವತ್ತು ಸಹಸ್ರ ಬಹುಮತದಿಂದ ಶ್ರೀ ಕೊಂಡಜ್ಜಿಯವರು ಲೋಕಸಭೆಗೆ ಆಯ್ಕೆಯಾದರೆಂದರೆ ಅವರ ಜನಪ್ರಿಯತೆ ಎಷ್ಟೆಂಬುದು ಅರ್ಥವಾಗುತ್ತದೆ.

ಲೋಕಸಭೆಗೆ ಚುನಾಯಿತರಾಗಿ ಬಂದ ವರ್ಷದ ನಂತರ ಕೇಂದ್ರಮಂತ್ರಿ ಮಂಡಲದಲ್ಲಿ ಉಪಸಚಿವರಾಗಿ ನೇಮಕಗೊಂಡರು. ಆರೋಗ್ಯ ಶಾಖೆಯಲ್ಲಿ ತಮಗೆ ವಹಿಸಿದ ಕೆಲಸವನ್ನು ಒಪ್ಪವಾಗಿ ನಡೆಸಿದರು.

ಯಾವ ವ್ಯಕ್ತಿಯೇ ಹೋಗಲಿ ಅವರ ಕಷ್ಟಗಳನ್ನು ವಿಚಾರಿಸಿ ಮಾತನಾಡಿಸುವ ತುಂಬು ಹೃದಯ ಇವರದು. ಇವರಿಗೆ ಸರಿಯಾದ ಗೃಹಿಣಿಯಾಗಿ ಶ್ರೀಮತಿ ಸರ್ವಮಂಗಳಮ್ಮ, ತಕ್ಕಂತಹ ಮಕ್ಕಳು. ಶ್ರೀಮತಿ ಇಂದಿರಾ ಗಾಂಧಿಯವರು ಇವರಿಗೆ ವಹಿಸಿದುದು ಕುಟುಂಬ ಯೋಜನೆ ಇಲಾಖೆಯಾದರೂ ಇವರು 7 ಜನ ಗಂಡುಮಕ್ಕಳು ಮತ್ತು ಒಬ್ಬ ಹೆಣ್ಣು ಮಗಳ ತಂದೆ! ಆರತಿಗೇನೋ ಒಬ್ಬ ಮಗಳಿದ್ದಾಳೆ. ಆದರೆ ಕೀರ್ತಿಗೆ ಮಾತ್ರ ಏಳು ಜನ ಗಂಡುಮಕ್ಕಳಿದ್ದಾರೆ!

ಶ್ರೀ ಬಸಪ್ಪನವರು ಮುಂಚೆಯೂ ಕೊಂಡಜ್ಜಿಯೇ, ಸಚಿವರಾಗಿದ್ದಾಗಲೂ ಕೊಂಡಜ್ಜಿಯೇ, ಎಂದಿಗೂ ಕೊಂಡಜ್ಜಿಯೇ. ನಮ್ಮಿಬ್ಬರ ಮಧ್ಯೆ ಬೆಳೆದ ವಿಶ್ವಾಸ ಆತ್ಮೀಯತೆಗಳು ನಿರಂತರವಾಗಿ ಒಂದೇ ಸಮನೆ ಉಳಿದಿದ್ದವು.

## ಕಲ್ಲುದೇವರ ಪೂಜಿಸಬೇಡ

ಕಲ್ಲನಾಗರ ಕಂಡರೆ ಹಾಲನೆರೆಯೆಂಬರು;
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ!
ಉಂಬ ಜಂಗಮ ಬಂದರೆ ನಡೆಯೆಂಬರು;
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ ।
ನಮ್ಮ ಕೂಡಲಸಂಗನ ಶರಣರ ಕಂಡು
ಉದಾಸೀನವ ಮಾಡಿದರೆ
ಕಲ್ಲತಾಗಿದ ಮಿಟ್ಟೆಯಂಪ್ಪತಪ್ಪರಯ್ಯಾ.

- ಬಸವಣ್ಣ

## ಎಲ್ಲರೂ ನಮ್ಮವರು

ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ
ಇವನಮ್ಮವ, ಇವನಮ್ಮವ, ಇವನಮ್ಮವನೆಂದೆನಿಸಯ್ಯಾ
ಕೂಡಲಸಂಗಮದೇವಾ
ನಿಮ್ಮ ಮನೆಯ ಮಗನೆಂದೆನಿಸಯ್ಯಾ.

- ಬಸವಣ್ಣ

# ಸರಳ ಹೃದಯದ ಕೊಂಡಜ್ಜಿ

**ವಿ. ಹನುಮಂತಪ್ಪ, ಭಾ.ಆ.ಸೇ. (ನಿ.)**
**ಕರ್ನಾಟಕ ಲೋಕಸೇವಾ ಆಯೋಗದ ಮಾಜಿ ಸದಸ್ಯರು**
**ಬೆಂಗಳೂರು**

ಶ್ರೀ ಕೊಂಡಜ್ಜಿ ಬಸಪ್ಪನವರನ್ನು ನಾನು ಮೊದಲ ಬಾರಿಗೆ ಕಂಡದ್ದು 1946ರಲ್ಲಿ. ಬೆಂಗಳೂರು ದಕ್ಷಿಣ ತಾಲ್ಲೂಕಿನ ಅಮಲ್ದಾರ್ ಆಗಿದ್ದ ನನಗೆ ಬಡ್ತಿ ದೊರೆತು, ಚಿತ್ರದುರ್ಗ ಜಿಲ್ಲೆಯ ಅಭಿವೃದ್ಧಿ ಅಧಿಕಾರಿಯಾಗಿ ನೇಮಕವಾದಾಗ ನನಗೆ ಶ್ರೀ ಕೊಂಡಜ್ಜಿ ಬಸಪ್ಪನವರ ಪರಿಚಯವಾಯಿತು. ಆಗ ಅವರು ಚಿತ್ರದುರ್ಗ ಜಿಲ್ಲಾ ಬೋರ್ಡು ಅಧ್ಯಕ್ಷರಾಗಿದ್ದರು. ಅವರ ಸರಳ ಹೃದಯ, ಜನರ ಸ್ಥಿತಿಯನ್ನು ಉತ್ತಮಪಡಿಸಲು ಅವರಿಗಿದ್ದ ಆಕಾಂಕ್ಷೆ, ತಮ್ಮ ಜಿಲ್ಲೆಗೆ ಕೈಲಾದ ಮಟ್ಟಿಗೂ ಸಹಾಯ ಮಾಡಿ, ಸರ್ವತೋಮುಖವಾದ ಅಭಿವೃದ್ಧಿಗೆ ಹಗಲಿರುಳು ದುಡಿಯಬೇಕೆಂಬ ಅಪೇಕ್ಷೆ ಅವರಲ್ಲಿದ್ದುದನ್ನು ಕಂಡು ನನಗೆ ಬಹಳ ಸಂತೋಷವಾಯಿತು. ನನ್ನ ಕರ್ತವ್ಯದ ಆಶಯವೂ ಅದೇ ಇದ್ದುದರಿಂದ, ಶ್ರೀ ಕೊಂಡಜ್ಜಿ ಬಸಪ್ಪನವರ ಪರಿಚಯವಾದುದು ಒಂದು ಯೋಗವೆಂದು ನಾನು ಭಾವಿಸಿದೆ. ನಮ್ಮಿಬ್ಬರ ಕಾರ್ಯಕ್ಷೇತ್ರಗಳಲ್ಲಿ ಪರಸ್ಪರ ಸಹಾಯಕರಾಗಿ ನಿಲ್ಲಲು ನಮಗೆ ಅವಕಾಶವಾಯಿತು. ನಾನೂ ಅವರೂ ಅನೇಕ ಸಾರಿ ಜೊತೆಯಲ್ಲಿಯೇ ಜಿಲ್ಲೆಯ ಮೂಲೆ ಮೂಲೆಯ ಹಳ್ಳಿಗಳಿಗೆಲ್ಲಾ ಹೋದೆವು. ಯಾವ ಹಳ್ಳಿಗೆ ಏನು ಸೌಲಭ್ಯವಿಲ್ಲವೆಂಬುದನ್ನು ಅರಿತು ಆ ಅಗತ್ಯವನ್ನು ಪೂರೈಸಲು ಅವರು ನಡೆಸಿದ ಪ್ರಯತ್ನ ನಿಜಕ್ಕೂ ಅನನ್ಯವಾದುದು. ಹಳ್ಳಿಗಳಿಗೆ ಶಾಲೆಗಳನ್ನು ಒದಗಿಸಲು ಅವರು ಪ್ರಥಮ ಆದ್ಯತೆ ನೀಡುತ್ತಿದ್ದರು. ಇದಕ್ಕೋಸ್ಕರ ಇಲಾಖಾ ಮುಖ್ಯಾಧಿಕಾರಿಗಳನ್ನು ಬೆಂಗಳೂರಿನಲ್ಲಿ ಕಾಣುವುದು, ಅವರನ್ನು ತಮ್ಮ ಜಿಲ್ಲೆಗೆ ಕರೆಯುವುದು, ಅವರು ಈ ಜಿಲ್ಲೆಗೆ ಬರುವ ದಿನಗಳನ್ನು ಗೊತ್ತುಪಡಿಸುವುದು, ಅನಂತರ ಅವರು ಬಂದಮೇಲೆ, ಅವರನ್ನು ಕರೆದುಕೊಂಡು, ತಾವು ಮೊದಲು ಮಾತುಕೊಟ್ಟ ಸ್ಥಳಗಳಿಗೆ ಕರೆದುಕೊಂಡು ಹೋಗಿ, ಅಲ್ಲಿಯ ಮುಖಂಡರುಗಳ ಪರಿಚಯ ಮಾಡಿಸಿ, ಅಲ್ಲಿ ಮಂಜೂರಾಗಬೇಕಾಗಿದ್ದ ಶಾಲೆಗಳ ಅವಶ್ಯಕತೆಯನ್ನು ತೋರಿಸಿ, ಅವರನ್ನು ಒಪ್ಪಿಸಿ, ಅನೇಕ ಶಾಲೆಗಳನ್ನು ಮಂಜೂರ್ಮಾಡಿಸಿದರು. ಇಷ್ಟು ಕೆಲಸಗಳನ್ನು ಮಾಡಿಸಬೇಕಾಗಿದ್ದರೆ ಸುಲಭವಲ್ಲ. ಅವರ ವಕೀಲ ವೃತ್ತಿ ಎಂದೋ ಕೈಬಿಟ್ಟು ಹೋಗಿತ್ತು. ಅವರ ಮನೆಯ ಕಡೆ ಗಮನ ಎಂದೋ ಮನಸ್ಸಿನಿಂದ ಜಾರಿ ಹೋಗಿತ್ತು. ಸುದೈವಕ್ಕೆ ಅವರ ಮಾವಂದಿರಾದ ಶ್ರೀ ಕಂದಗಲ್‌ಗೌಡರು ದೊಡ್ಡ ಜಮೀನ್ದಾರರಾದ್ದರಿಂದ, ಇವರ ಸಂಸಾರದ ಭಾರವನ್ನೆಲ್ಲ ಹೊತ್ತಿದ್ದರು. ಅವರಿಗೂ ಸಹ, ತಮ್ಮ ಅಳಿಯ ಜಿಲ್ಲೆಯ ಅಭಿವೃದ್ಧಿಗೆ ಇಷ್ಟೊಂದು ಉತ್ಸಾಹದಿಂದ ಕೆಲಸ ಮಾಡುತ್ತಾ ಇದ್ದುದು ಅಭಿಮಾನವುಂಟುಮಾಡಿತ್ತು.

ಚಿತ್ರದುರ್ಗ ಜಿಲ್ಲೆ ವಿದ್ಯಾಭಿವೃದ್ಧಿಯ ವಿಷಯದಲ್ಲಿ ಮುಂದೆ ಬರಲು ಭದ್ರವಾದ ತಳಪಾಯ ಹಾಕಿದವರಲ್ಲಿ ಶ್ರೀ ಕೊಂಡಜ್ಜಿ ಬಸಪ್ಪನವರಿಗೆ ಅಗ್ರ ಪಂಕ್ತಿ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ವಿದ್ಯಾಕ್ಷೇತ್ರದಲ್ಲಷ್ಟೇ ಅಲ್ಲದೆ, ಕೆರೆಗಳ ದುರಸ್ತಿ, ಗ್ರಾಮಾಂತರ ರಸ್ತೆಗಳ ನಿರ್ಮಾಣ ಮೊದಲಾದ ಕಾರ್ಯಗಳಲ್ಲೂ ಅಷ್ಟೇ ಆಸಕ್ತಿವಹಿಸಿ ದುಡಿಯುತ್ತಿದ್ದರು. ಈ ಕೆಲಸಗಳಿಗೆ ಸರ್ಕಾರದಿಂದ ಮಾಡಿಸುವ ಕೆಲಸಗಳು ಒಂದು ಬಗೆಯದಾದರೆ ಗ್ರಾಮಾಂತರ ರಸ್ತೆಗಳ ನಿರ್ಮಾಣದಂತಹ ಕಾರ್ಯದಲ್ಲಿ ಮಾತ್ರ ಜನಗಳ ಸಹಕಾರ ಬಹಳ ಮುಖ್ಯ. ರೈತರು ರಸ್ತೆಗಾಗಿ ತಮ್ಮ ಜಮೀನುಗಳಲ್ಲಿ ಅವಕಾಶ ಕೊಡಲು ಎಷ್ಟೋ ವೇಳೆ ಒಪ್ಪುತ್ತಿರಲಿಲ್ಲ. ಆದರೆ ಶ್ರೀ ಕೊಂಡಜ್ಜಿ ಬಸಪ್ಪನವರು ತಮ್ಮ ಜಾಣ್ಮೆ ಮತ್ತು ಸ್ಫೈರಣೆಯಿಂದ, ಗ್ರಾಮದ ಎಲ್ಲ ಜನರನ್ನೂ ಒಪ್ಪಿಸುತ್ತಿದ್ದರು. ಅದರ ಫಲವಾಗಿ ಅನೇಕ ಗ್ರಾಮಾಂತರ ರಸ್ತೆಗಳಾದುವು. ಅವರ ಜನೋಪಯೋಗಿ ಕಾರ್ಯಗಳಿಂದಾಗಿ ಗ್ರಾಮಾಂತರದಲ್ಲಿ ನಡೆಯುವ ಯಾವುದೇ ಸಭೆ ಸಮಾರಂಭಗಳು ಶ್ರೀ ಕೊಂಡಜ್ಜಿಯವರಿಲ್ಲದೆ ನಡೆಯುತ್ತಿರಲಿಲ್ಲ. ಅವರು ಹಾಜರಿದ್ದ ಸಭೆಗಳಲ್ಲಿ ಜನಗಳು ಸಾವಿರಗಟ್ಟಲೆ ಸೇರುತ್ತಿದ್ದರು. ಈ ಸಂದರ್ಭದಲ್ಲಿ ನಮ್ಮ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಹಾಲಪ್ಪ ನಾಯುಕ್ ಪಾಳೇಗಾರ್ ಅವರು ಕೊಟ್ಟ ಪ್ರೋತ್ಸಾಹವನ್ನು ನಾನು ಮರೆಯುವಂತಿಲ್ಲ. ನಾವು ಮಾಡುವ ಕೆಲಸಕ್ಕೆ ಅವರ ಸಂಪೂರ್ಣ ಬೆಂಬಲವಿತ್ತು. ಇದಕ್ಕೆ ಒಂದು ವಿಶೇಷ ಕಾರಣವೂ ಇಲ್ಲದೆ ಇರಲಿಲ್ಲ. ಅವರು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನವರು. ನಾನು ದಾವಣಗೆರೆ ಪಟ್ಟಣದವನು. ಶ್ರೀ ಕೊಂಡಜ್ಜಿ ಬಸಪ್ಪನವರು ಹರಿಹರ ತಾಲ್ಲೂಕಿನ ಕೊಂಡಜ್ಜಿ ಗ್ರಾಮದವರು. ದೇವರ ಕೃಪೆಯೇನೋ

ಎನ್ನುವಂತೆ ನಾವು ಮೂವರೂ ಒಂದೇ ಜಿಲ್ಲೆಯವರಾದ್ದರಿಂದ, ಮೂವರೂ ಒಂದೇ ಮನಸ್ಸಿನಿಂದ ಕೆಲಸ ಮಾಡಿದೆವು. ಆ ಮೂಲಕ ಜನ್ಮಕೊಟ್ಟ ಜಿಲ್ಲೆಗೆ ಕೈಲಾದ ಋಣ ಸಲ್ಲಿಸಲು ಅವಕಾಶವಾಯಿತು.

ನಾವು ಜಿಲ್ಲೆಯ ಒಳಭಾಗದಲ್ಲಿ ಪ್ರಯಾಣ ಮಾಡುತ್ತಿದ್ದಾಗ, ನಡೆದ ಕೆಲವು ಘಟನೆಗಳು ಈಗಲೂ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿ ನಿಂತಿವೆ. ಒಮ್ಮೆ ಒಂದು ಹಳ್ಳಿಯ ದಾರಿಯಲ್ಲಿ ಮೋಟಾರು ವ್ಯಾನಿನಿಂದ ಇಳಿದೆವು. ಸಮೀಪದಲ್ಲಿಯೇ ಒಂದು ಸಣ್ಣ ಗುಡಿಸಲು. ಅದರ ಬಾಗಿಲು ಮುಚ್ಚಿತ್ತು. ಅದರ ಪಕ್ಕದಲ್ಲಿ ಒಂದು ಮಣ್ಣಿನ ಮಡಕೆ ಮತ್ತು ಮಣ್ಣಿನ ಮುಚ್ಚಳ. ಒಂದು ಉದ್ದನೆಯ ಕೋಲು ಬಿದ್ದಿತ್ತು. ಆ ಗುಡಿಸಲಿಂದ ಒಂದು ಸಣ್ಣ ಮಗು ಅರಚುವ ಶಬ್ದ ಕಿವಿಗೆ ಬಿತ್ತು. "ಇದೇನು ಈ ಸಣ್ಣ ಗುಡಿಸಲೊಂದೇ ಊರಿನಿಂದ ಇಷ್ಟು ಹೊರಗಡೆ ಇಷ್ಟು ಒಂಟಿಯಾಗಿ ಏಕೆ ಇದೆ? ಒಳಗಡೆ ಯಾವುದೋ ಮಗು ಇರುವಂತೆ ಕಾಣುತ್ತದೆ" ಎಂದು ಶ್ರೀ ಕೊಂಡಜ್ಜಿಯವರು ಕೇಳಿದರು. ಹಳ್ಳಿಯ ಪಟೇಲರು ಮತ್ತು ಗ್ರಾಮಸ್ಥರು, "ಸ್ವಾಮಿ ಇದು ಗೊಲ್ಲರ ಗುಡಿಸಲು. ಆ ಜನಾಂಗದವರಲ್ಲಿ ಹೆರಿಗೆಯಾಗುವಾಗ ಆ ಹೆಣ್ಣುಮಗಳನ್ನು ಊರಿಂದ ದೂರ ಇಡುತ್ತಾರೆ. ಅಲ್ಲಿ ಹೆರಿಗೆಯಾದ ಮೇಲೆ ಕೆಲವು ದಿವಸ ಅದರೊಳಗೆ ಆ ಹುಡುಗಿಯ ಸಂಬಂಧಿಕರು ಯಾರೂ ವಾಸ ಮಾಡುವುದಿಲ್ಲ. ಊಟವನ್ನು ಆ ಮಡಿಕೆಗೆ ಹಾಕಿ ಇಲ್ಲಿರುವ ಕೋಲಿನಿಂದ ಮುಚ್ಚಳದಲ್ಲಿ ತಳ್ಳುತ್ತಾರೆ. ಹಿಂದೆ ಒಂದು ಸಾರಿ ಒಂದು ಹಾವು ಕಚ್ಚಿ ತಾಯಿ ಮಗ, ಇಬ್ಬರೂ ತೀರಿಕೊಂಡರು" ಎಂದು ಹೇಳಿದರು. ಎಂತಹ ಕಂದಾಚಾರ! ಎಂತಹ ಮೂಢನಂಬಿಕೆ! ನಮಗೆಲ್ಲಾ ಬಹಳ ದುಃಖವಾಯಿತು. ಆ ದಿವಸ ಅಲ್ಲಿದ್ದ ಜನರಿಗೆ ಶ್ರೀ ಕೊಂಡಜ್ಜಿಯವರು ತಿಳಿಹೇಳಿ ಅರ್ಥವಿಲ್ಲದ ಸಂಪ್ರದಾಯಗಳನ್ನು ಬಿಡಬೇಕೆಂದು ಹಿತನುಡಿದರು. ಇನ್ನುಮುಂದೆ ಆ ರೀತಿ ಗುಡಿಸಲಿನಲ್ಲಿ ಇಡುವುದಿಲ್ಲವೆಂದು ಅವರೆಲ್ಲ ಪ್ರಮಾಣ ಮಾಡಿದರು. "ಊರಿನ ಪಕ್ಕದಲ್ಲಿಯೇ ಒಂದು ಮನೆಯನ್ನು ಕಟ್ಟಿಸಿ ಅಲ್ಲಿ ಹೆರಿಗೆಯಾಗುವುದಕ್ಕೆ ಏರ್ಪಾಡು ಮಾಡಿ, ಅವರ ಹತ್ತಿರ ಸಂಬಂಧಿಕರು ಇರುವಂತೆ ಮಾಡುತ್ತೇವೆ" ಎಂದರು. ಇದಾದ ಮೇಲೆ ಪ್ರತಿ ಸಭೆಯಲ್ಲೂ ಕೊಂಡಜ್ಜಿ ಅವರು ಈ ಮೂಢ ಪದ್ಧತಿಯನ್ನು ಖಂಡಿಸುತ್ತಿದ್ದರು.

ಹಿಂದುಳಿದ ಜನಾಂಗದವರ ಬಗ್ಗೆ ಶ್ರೀ ಬಸಪ್ಪನವರಿಗೆ ಬಹಳ ಅನುಕಂಪ. ಅವರ ಜೀವನ ಸುಧಾರಣೆಗೆ ಬಹಳ ಶ್ರಮ ಪಟ್ಟಿದ್ದಾರೆ. ನಿಮ್ನ ವರ್ಗದವರಿಗೆ ಮನೆಗಳನ್ನು ಕಟ್ಟಿಸಲು ನಿವೇಶನಕ್ಕಾಗಿ ಊರ ಪಕ್ಕದಲ್ಲಿದ್ದ ದೊಡ್ಡ ಜಮೀನ್ದಾರರುಗಳಿಗೆ ಹಿತಹೇಳಿ ಅವರನ್ನು ಒಪ್ಪಿಸಿ ಜಮೀನು ಬಿಡಿಸಿಕೊಟ್ಟ ಉದಾಹರಣೆಗಳು ಎಷ್ಟೋ ಇವೆ. ಇವರ ಸೇವಾ ಚಟುವಟಿಕೆಗಳ ಪಟ್ಟಿ ಮಾಡಲು ನನಗೆ ಇಷ್ಟವಿಲ್ಲ. ಏಕೆಂದರೆ ಅವರ ಇಡೀ ಜೀವನವೇ ಸೇವೆಗಾಗಿ ಮೀಸಲಾಗಿದೆ.

ಒಟ್ಟಿನಲ್ಲಿ ಶ್ರೀ ಕೊಂಡಜ್ಜಿಯವರಲ್ಲಿ ನಾನು ಕಂಡ ಗುಣಗಳೆಂದರೆ: ಸೌಜನ್ಯತೆ, ಸರಳಸ್ವಭಾವ ಮತ್ತು ಮಾನವ ಪ್ರೇಮ. ಮಾನವ ಪ್ರೇಮವಿದ್ದ ಮೇಲೆ, ಸಂಕುಚಿತ ಜಾತೀಯ ಭಾವನೆಗೆ ಎಡೆಯೆಲ್ಲಿದೆ? ಜಾತಿ ದ್ವೇಷ ಅವರಿಂದ ಬಹುದೂರ. ಎಲ್ಲರಲ್ಲಿಯೂ ತುಂಬಿ ತುಳುಕುವ ವಿಶ್ವಾಸ ಅವರದು. ಅವರಿಂದ ಸಹಾಯ ಪಡೆದ ಜನರು ಅನೇಕ. ಮಹಾ ಶಿವಶರಣ ಅಣ್ಣ ಚನ್ನಬಸವಣ್ಣನವರು "...ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ" ಎಂದು ಹೇಳಿದ್ದಾರೆ. ಆ ಶರಣರ ಪಂಕ್ತಿಯಲ್ಲಿ ಸೇರಿದ್ದಾರೆ ಶ್ರೀ ಕೊಂಡಜ್ಜಿ ಬಸಪ್ಪನವರು.

ಶಿಕ್ಷಣವೆಂದರೆ ಬರೀ ಓದಲ್ಲ;
ಕೇವಲ ಪುಸ್ತಕ ಜ್ಞಾನವಲ್ಲ;
ಅದು ಮಾನವತೆಯ ವಿಕಾಸ.

- ಗುರುದೇವ

# ಹುಟ್ಟೂರಿಗೆ ಕೊಂಡಜ್ಜಿ ಬಸಪ್ಪನವರ ಸೇವೆ

**ಕೊಂಡಜ್ಜಿ ಎ. ಈಶ್ವರಪ್ಪ**
ರೈತ ಸಹಕಾರ ಸಂಘದ ಅಧ್ಯಕ್ಷರು
ಹಾಗೂ ವಕೀಲರು, ದಾವಣಗೆರೆ

**ಕೊಂ**ಡಜ್ಜಿ ಗ್ರಾಮ ಹರಿಹರ ತಾಲ್ಲೂಕಿಗೆ ಸೇರಿದ ಸುಮಾರು 300 ಮನೆಗಳ ಒಂದು ಸಣ್ಣ ಹಳ್ಳಿ. ದಾವಣಗೆರೆಯಿಂದ 8 ಮೈಲಿ, ಹರಿಹರದಿಂದ 9 ಮೈಲಿ ದೂರದಲ್ಲಿರುವ ಈ ಗ್ರಾಮ ಭೌಗೋಳಿಕವಾಗಿ ಚಿತ್ರದುರ್ಗ, ಬಳ್ಳಾರಿ ಮತ್ತು ಧಾರವಾಡ ಜಿಲ್ಲೆಗಳ ಗಡಿಗಳು ಕೂಡುವ ಕೇಂದ್ರ ಸ್ಥಳದಲ್ಲಿದ್ದು ಮಧ್ಯವರ್ತಿ ಗ್ರಾಮವಾಗಿದೆ. ಊರಿನ ಪೂರ್ವ ಭಾಗದಲ್ಲಿ ಸುಮಾರು 3 ಸಾವಿರ ಎಕರೆ ವಿಸ್ತೀರ್ಣ ಉಳ್ಳ ಗುಡ್ಡ, ದಿಣ್ಣೆಗಳಿಂದ ಕೂಡಿದ, ನಾನಾ ರೀತಿಯ ಗಿಡಮರಗಳಿಂದ ಶೋಭಿಸುವ ವನಪ್ರದೇಶವೂ, ಅದರ ಅಂಚಿನಲ್ಲಿ ಸಣ್ಣದೊಂದು ಕೆರೆಯೂ ಇದ್ದು ಪ್ರಕೃತಿ ಸೌಂದರ್ಯದ ರಮ್ಯನೋಟವಿದೆ. ಪಶ್ಚಿಮ ದಿಕ್ಕಿನಲ್ಲಿ ಅನತಿ ದೂರದಲ್ಲೇ ಹರಿಯುತ್ತಿರುವ ತುಂಗಭದ್ರಾ ನದಿ ಹರಿಹರೇಶ್ವರನ ಅಧಿಸ್ಥಾನವಾದ ಹರಿಹರ ಮತ್ತು ಸುಪ್ರಸಿದ್ಧ ಐರಣಿ ಕ್ಷೇತ್ರಗಳು ನಯನ ಮನೋಹರವಾದ ಹಿನ್ನೆಲೆಯನ್ನು ಒದಗಿಸಿವೆ. ಕೊಂಡಜ್ಜಿ ಗ್ರಾಮವು ಮೊದಲಿನಿಂದಲೂ ಹರಿಹರ ತಾಲ್ಲೂಕಿನಲ್ಲಿ ಒಂದು ಮಾದರಿ ಗ್ರಾಮ ಎಂದು ಹೆಸರು ಪಡೆದಿದೆ.

ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಕೇಳಿಬರುತ್ತಿದ್ದ ನಮ್ಮ ಗ್ರಾಮದ ಹೆಸರನ್ನು ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟಕ್ಕೆ ಎತ್ತಿ ನಿಲ್ಲಿಸಿದ ಕೀರ್ತಿ ಗ್ರಾಮದ ಹೆಮ್ಮೆಯ ಪುತ್ರ ಕೊಂಡಜ್ಜಿ ಬಸಪ್ಪನವರದು. ಅವರಿಂದ ನಮಗೆ, ಕೊಂಡಜ್ಜಿ ಗ್ರಾಮಕ್ಕೆ ಸಂದಿರುವ ಸೇವೆ ಅಪಾರವಾದದ್ದು.

ಶ್ರೀ ಬಸಪ್ಪನವರ ಸಾರ್ವಜನಿಕ ಸೇವೆಯ ಹಂಬಲಕ್ಕೆ ಪೂರ್ಣ ಅವಕಾಶ ದೊರೆತದ್ದು ಅವರು ಚಿತ್ರದುರ್ಗ ಜಿಲ್ಲಾ ಬೋರ್ಡಿನ ಅಧ್ಯಕ್ಷರಾದಾಗ, ಅಂದಿನಿಂದಲೇ ಅವರ ರಾಜಕೀಯ ಜೀವನದಲ್ಲಿ ಮಹತ್ತರ ತಿರುವು ಉಂಟಾಯಿತೆಂದು ಹೇಳಬಹುದು. ಅಂದಿನ ಡೆಪ್ಯುಟಿ ಕಮೀಷನರ್ ಶ್ರೀ ನಿರ್ವಾಣೇಗೌಡರ ಬೆಂಬಲ ಮತ್ತು ಸಹಕಾರದಿಂದ ಜಿಲ್ಲೆಯ ಮೂಲೆ ಮೂಲೆಗಳನ್ನು ಸುತ್ತಿ, ಗ್ರಾಮಾಂತರ ಪ್ರದೇಶದ ಅಭಿವೃದ್ಧಿಗೆ ಅತ್ಯಗತ್ಯವಾದ ಸಂಪರ್ಕ ರಸ್ತೆಗಳು ಮತ್ತು ಕುಡಿಯುವ ನೀರಿನ ಬಾವಿಗಳು ಮುಂತಾದ ಕಾರ್ಯಗಳನ್ನು ಬಹಳ ಮುತುವರ್ಜಿಯಿಂದ ಮಾಡಿಸಿ ಇಡೀ ಜಿಲ್ಲೆಯ ಜನರ ಪ್ರೀತಿ-ವಿಶ್ವಾಸಗಳನ್ನು ಗಳಿಸಿದರು. ಈ ಸೇವೆಗೆ ಮೆಚ್ಚಿ ಅಂದಿನ ಮಹಾರಾಜರ ಸರ್ಕಾರವು ಚಿನ್ನದ ಪದಕ ನೀಡಿ ಗೌರವಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

ಸಹಕಾರ ಖಾತೆಯ ಉಪಸಚಿವರಾಗಿದ್ದಾಗ ಅವರು ರೂಪಿಸಿ ಕಾರ್ಯಗತ ಮಾಡಿದ ಸಹಕಾರ ಸಗಟು ಮಾರಾಟ ಕೇಂದ್ರಗಳು ಮತ್ತು ಗ್ರಾಮಾಂತರ ಸೇವಾ ಸಹಕಾರ ಸಂಘಗಳು ಇಂದು ನಮ್ಮ ರಾಜ್ಯದಲ್ಲಿ ಸಲ್ಲಿಸುತ್ತಿರುವ ಸೇವೆಯ ಫಲ ನಮ್ಮೆಲ್ಲರಿಗೆ ದೊರಕಿದೆ. ಅವರು ವಕೀಲರಾಗಿದ್ದಾಗ ಆರಂಭಿಸಿದ ದಾವಣಗೆರೆಯ ವ್ಯವಸಾಯಗಾರರ ಸಹಕಾರ ಸಂಘವು ಇತ್ತೀಚೆಗೆ ಬೆಳ್ಳಿ ಹಬ್ಬವನ್ನು ಆಚರಿಸಿತು. ದಾವಣಗೆರೆಯ ಭೂ ಅಭಿವೃದ್ಧಿ ಬ್ಯಾಂಕಿಗೂ, ಚಿತ್ರದುರ್ಗ ಜಿಲ್ಲಾ ಸಹಕಾರ ಬ್ಯಾಂಕಿಗೂ, ಭದ್ರಾ ಕೋ-ಆಪರೇಟಿವ್ ಷುಗರ್ ಕಂಪನಿಗೂ ಅವರು ನಾನಾ ರೀತಿಯಲ್ಲಿ ಸಹಾಯ ಮಾಡಿರುತ್ತಾರೆ. ಅನೇಕ ಉನ್ನತ ಸ್ಥಾನಗಳನ್ನು ಪಡೆದು, ದೂರ ದೂರ ಊರುಗಳಿಗೆ ಹೋದರೂ, ಸ್ವಗ್ರಾಮವಾದ ಕೊಂಡಜ್ಜಿಯ ಮೇಲೆ ಮಾತ್ರ ಬಸಪ್ಪನವರ ಕಣ್ಣು ಸದಾ ಇದ್ದೇ ಇತ್ತು.

ಕೊಂಡಜ್ಜಿಯನ್ನು ಒಂದು ಆದರ್ಶ ಗ್ರಾಮವನ್ನಾಗಿ ರೂಪಿಸಬೇಕೆಂಬುದು ಶ್ರೀ ಬಸಪ್ಪನವರ ಹಿರಿಯಾಸೆ. ಊರಿನ ಏಳಿಗೆ ಆಗಬೇಕಾದರೆ ಹೊರ ಜಗತ್ತಿನ ಸಂಪರ್ಕ ಬಹು ಮುಖ್ಯವಾದದ್ದು. ಇದನ್ನು ಮನಗಂಡ ಬಸಪ್ಪನವರು ಸರ್ಕಾರದ ವತಿಯಿಂದ ದಾವಣಗೆರೆಯಿಂದ ಕೊಂಡಜ್ಜಿಯವರೆಗೂ, ಕೊಂಡಜ್ಜಿಯಿಂದ ಹರಿಹರದವರೆವಿಗೂ ಉತ್ತಮವಾದ ರಸ್ತೆಯನ್ನು ಮಾಡಿಸಿ ಬಸ್ಸುಗಳು ಬಂದು ಹೋಗುವಂತೆ ಮಾಡಿದ್ದಾರೆ. ಊರಿನ ಮುಂಭಾಗದಲ್ಲಿ ನಿರ್ಮಿಸಿರುವ ಸುಂದರವಾದ ವೃತ್ತವೂ ಅವರದೇ ಕಲ್ಪನೆ. ಕಕ್ಕರಗೊಳ್ಳ ಕೊಂಡಜ್ಜಿ ಮಧ್ಯೆ ಇರುವ ಹಳ್ಳಕ್ಕೆ ಸುಮಾರು 3 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಕಟ್ಟಿರುವ ಸೇತುವೆಗೆ ಅವರ ಯತ್ನವೇ

ಮುಖ್ಯ ಕಾರಣ. ನಮ್ಮ ಗ್ರಾಮದ ಸ್ಕೂಲ್ ಕಟ್ಟಡ. ಬಸ್‌ಸ್ಟ್ಯಾಂಡ್, ಗೋಡೌನ್, ಪಶುವೈದ್ಯಶಾಲೆ, ಆರೋಗ್ಯಕೇಂದ್ರ, ಶಿಶುವಿಹಾರ ಹಾಗೂ ಮನರಂಜನಾ ಕೇಂದ್ರ, ವಿದ್ಯುಚ್ಛಕ್ತಿ, ನೀರಿನ ಪೂರೈಕೆ ಮುಂತಾದ ನಾನಾ ಉಪಯುಕ್ತ ಕಾರ್ಯಗಳಿಗೆ ಕಾರಣಕರ್ತರಾಗಿದ್ದಾರೆ. ನಂತರ ಗ್ರಂಥಭಂಡಾರವನ್ನೂ, ಟೆಲಿಫೋನ್ ಸೌಕರ್ಯಗಳನ್ನು ಒದಗಿಸಿಕೊಟ್ಟರು. ಉಪಾಧ್ಯಾಯರು ಮತ್ತು ಆಸ್ಪತ್ರೆ ಸಿಬ್ಬಂದಿ ವರ್ಗದವರಿಗೆ ಪ್ರತ್ಯೇಕ ವಸತಿ ಸೌಕರ್ಯವನ್ನು ಕಟ್ಟಿಸಿಕೊಡಲು ಸಹಾಯಕರಾದರು.

ಗ್ರಾಮದ ಜನರ ಆರ್ಥಿಕ ಸಾಮಾಜಿಕ ಅಭಿವೃದ್ಧಿಗಾಗಿ ಬಸಪ್ಪನವರು ತುಂಬಾ ದೂರದೃಷ್ಟಿ ಯೋಜನೆಗಳನ್ನು ಹಾಕಿಕೊಂಡು, ಸಂಬಂಧಪಟ್ಟ ಇಲಾಖೆಗಳ ನೆರವಿನಿಂದ ಅವನ್ನೆಲ್ಲಾ ಕಾಲ-ಕಾಲಕ್ಕೆ ಕಾರ್ಯಗತಗೊಳಿಸುತ್ತಾ ಬಂದರು. ಗ್ರಾಮದಲ್ಲಿ ಅನೇಕ ಕೋಮಿನ ಜನರಿದ್ದಾರೆ. ನಾವೆಲ್ಲರೂ ಕೃಷಿಯ ಮೇಲೆ ಅವಲಂಬಿತರಾದವರು ಮತ್ತು ಹಿಂದುಳಿದ ಜನಾಂಗದವರು. ಕೃಷಿ ಕಾರ್ಮಿಕರಾಗಿ ಜೀವನ ಮಾಡುತ್ತಿರುವವರು. ಗ್ರಾಮದ ಪ್ರತಿಯೊಂದು ಕುಟುಂಬಕ್ಕೂ ಸ್ವಂತಮನೆ ಇರಬೇಕೆಂಬುದು ಬಸಪ್ಪನವರ ಸಂಕಲ್ಪ. ಅದಕ್ಕಾಗಿ ಸರ್ಕಾರದಲ್ಲಿ ಪ್ರಭಾವ ಬೀರಿ ಬಸಪ್ಪನವರ ಗ್ರಾಮದ ಬಡಾವಣೆಗಾಗಿ ಸುಮಾರು 30 ಎಕರೆ ಜಮೀನನ್ನು ಸೈಟುಗಳಾಗಿ ವಿಂಗಡಿಸಿ, ಅದರಲ್ಲಿ 100 ಸೈಟುಗಳನ್ನು ಹರಿಜನರಿಗೆ ಮತ್ತು ಬಡವರಿಗೆ ಹಂಚಿದರು.

ನೀರು ತುಂಬಿ ತಗ್ಗಾದ ಕೊಳಚೆಗಳಲ್ಲಿದ್ದ ಊರಿನ ಹರಿಜನರು, ಈಗ ಊರಿನ ಮುಂಭಾಗದಲ್ಲೇ ಎತ್ತರವಾದ ಉತ್ತಮ ನಿವೇಶನಗಳಲ್ಲಿ ನೆಲಸುವಂತಾಗಿದೆ. ಗುಡಿಸಲು ವಾಸಿಗಳಾಗಿದ್ದ ಅವರಿಗೆ ಸರ್ಕಾರದಿಂದ ಸಹಾಯ ದೊರಕಿಸಿ ಅವರೆಲ್ಲರೂ ಸ್ವಂತದ ಹೆಂಚಿನ ಮನೆಗಳಲ್ಲಿ ವಾಸಿಸುವಂತೆ ಮಾಡಿದ್ದಾರೆ. ಜನತಾ ವಸತಿ ಯೋಜನೆಯ ಮೂಲಕ 15 ಮನೆಗಳನ್ನು ಕಟ್ಟಿಸಿರುವುದಲ್ಲದೆ, ಇನ್ನೂ 10 ಮನೆಗಳನ್ನು ಮಂಜೂರು ಮಾಡಿಸಿರುತ್ತಾರೆ. ಉತ್ತಮ ರಸ್ತೆಗಳನ್ನೂ, ಕುಡಿಯಲು ಉತ್ತಮ ನೀರನ್ನೂ ಅವರೆಲ್ಲರಿಗೂ ಒದಗಿಸಿ ತಮ್ಮ ಮನೆಗಳ ಆವರಣದಲ್ಲಿ ತೆಂಗಿನ ಸಸಿಗಳನ್ನು ಬೆಳೆಯಲು ಅವರಿಗೆ ಪ್ರೇರಣೆ ನೀಡಿದ್ದಾರೆ.

ಇಷ್ಟೆಲ್ಲಾ ಅಭಿವೃದ್ಧಿ ಕಾರ್ಯಗಳು ನಡೆದಿದ್ದರೂ, ಬಸಪ್ಪನವರು ಯಾವಾಗಲೂ ಸುಮ್ಮನೆ ಕುಳಿತವರಲ್ಲ. ಇಡೀ ಗ್ರಾಮದಲ್ಲಿ ಪ್ರತಿಯೊಂದು ಕುಟುಂಬವೂ ಸ್ವಾವಲಂಬಿಯಾಗಿ ಪ್ರತಿಯೊಬ್ಬ ಪ್ರಜೆಯೂ ಉದ್ಯೋಗಶೀಲನಾಗಿ, ಸರ್ವರೂ ಸುಖದಿಂದ ಬಾಳುವಂತಾಗಬೇಕೆಂದು ಅವರು ಹೊಸ ಹೊಸ ಯೋಜನೆಗಳನ್ನು ಹಾಕುತ್ತಲೇ ಇರುತ್ತಿದ್ದರು. ಊರಿಗೆ ಬಂದಾಗಲೆಲ್ಲಾ ಎಲ್ಲರ ಸಂಗಡ ಸಾಮಾನ್ಯರಲ್ಲಿ ಸಾಮಾನ್ಯರಂತೆ ಬೆರೆತು ಅವರ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ನೆರವಾಗುತ್ತಿದ್ದರು. ಎಷ್ಟೇ ತೊಡಕುಗಳಿದ್ದರೂ ಬೇಸರಪಟ್ಟುಕೊಳ್ಳದೆ, ಹಿತ-ಮಿತ ವಚನಗಳಿಂದ ಎಲ್ಲರನ್ನೂ ಸಮಾಧಾನಪಡಿಸುತ್ತಿದ್ದರು. ಇಂತಹ ಶ್ರೇಷ್ಠ ಸಮಾಜ ಸೇವಕರೊಬ್ಬರು ಕೊಂಡಜ್ಜಿಯಲ್ಲಿ ಹುಟ್ಟಿದ್ದು ವಿಶೇಷ ಭಾಗ್ಯವೆಂದೇ ಕೊಂಡಜ್ಜಿಯ ಜನ ನಂಬಿದ್ದಾರೆ.

ಬಸಪ್ಪನವರ ಸೇವೆ ಇಷ್ಟಕ್ಕೇ ನಿಂತಿಲ್ಲ. ಕೊಂಡಜ್ಜಿಯ ಹೆಸರು ಅಂತರರಾಷ್ಟ್ರೀಯ ಮಟ್ಟದಲ್ಲಿ ಕೇಳಿಬರುವಂತಹ ಅಸದೃಶ ಕಾರ್ಯವನ್ನು ಅವರು ನಮ್ಮ ಗ್ರಾಮದ ಪಕ್ಕದಲ್ಲಿ ರಾಜ್ಯಮಟ್ಟದ ಸ್ಕೌಟ್ ಶಿಕ್ಷಣ ಕೇಂದ್ರ ಶಿಬಿರದ ಮೂಲಕ ಮಾಡಿದ್ದಾರೆ. ಕರ್ನಾಟಕ ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪ್ರಧಾನ ಕಮೀಷನರ್ ಆಗಿ ಹಲವಾರು ವರ್ಷಗಳಿಂದ ದುಡಿಯುತ್ತಿರುವ ಬಸಪ್ಪನವರು ಅನೇಕ ಬಾರಿ ವಿದೇಶ ಪ್ರವಾಸವನ್ನೂ ಕೈಗೊಂಡಿದ್ದಾರೆ. ಅಲ್ಲಿ ಕಂಡುಬಂದ ವೈಶಿಷ್ಟ್ಯಗಳನ್ನೆಲ್ಲಾ ಕೊಂಡಜ್ಜಿಯ ಕೇಂದ್ರದಲ್ಲಿ ಅಳವಡಿಸಿದ್ದಾರೆ.

ಕೇವಲ ಅಡವಿಯಾಗಿದ್ದ ಸುಮಾರು 80 ಎಕರೆ ಗುಡ್ಡ ಪ್ರದೇಶದಲ್ಲಿ ಇಂದು ಸರ್ವ ಸೌಕರ್ಯಗಳನ್ನೊಳಗೊಂಡ ಸುಂದರ ಸ್ಕೌಟ್ ಕೇಂದ್ರ ತಲೆ ಎತ್ತಿದೆ. ದಾವಣಗೆರೆಯ ಕೊಡುಗೈದಾನಿ ಧರ್ಮರತ್ನಾಕರ ರಾಜನಹಳ್ಳಿ ಶ್ರೀ ಮದ್ದೂರಾಯಪ್ಪನವರ ಉದಾರ ಸಹಾಯದಿಂದ ಒಂದು ಸ್ಕೌಟ್ ಭವನ ನಿರ್ಮಾಣವಾಗಿದೆ. ಗುಡ್ಡದ ತುದಿಯಲ್ಲಿ ನಿಂತು ಸುತ್ತಣ ಪ್ರಕೃತಿ ಸೌಂದರ್ಯವನ್ನು ಸವಿಯಲು ಅನುಕೂಲವಾಗುವಂತೆ ಶ್ರೀ ಚಿಗಟೇರಿ ಜಯಣ್ಣ ಮನೆತನದವರ ನೆರವಿನಿಂದ ಒಂದು ಅಷ್ಟಕೋನ ಗೋಪುರ ನಿರ್ಮಿತವಾಗಿದೆ. ಅರಣ್ಯ ಇಲಾಖೆ ಮತ್ತು ತೋಟಗಾರಿಕೆ ಇಲಾಖೆಯವರು ಶ್ರದ್ಧೆಯಿಂದ ಬೆಳೆಸಿರುವ ಸಹಸ್ರಾರು ಮರಗಳು ಇಡೀ ಗುಡ್ಡಕ್ಕೆ ಹಸಿರು ಉಡಿಗೆ ಉಡಿಸಿದಂತೆ ಶೋಭಾಯಮಾನವಾಗಿದೆ. ಪೈರೆಪ್ ಯೋಜನೆಯ ಉತ್ಸಾಹೀ ಅಧಿಕಾರಿ ಶ್ರೀ ಯಳಸಂಗಿಕರ್‌ರವರ ಶ್ರಮದ ಫಲವಾಗಿ ಇಡೀ ಶಿಬಿರದ ವಿವಿಧ ಭಾಗಗಳಿಗೆ ಹೋಗಿ ಬರಲು ಪಕ್ಕಾ ರಸ್ತೆ ತಯಾರಾಗಿದ್ದು, ವಿದ್ಯುದ್ದೀಪಗಳನ್ನೂ ಹಾಕಲಾಗಿದೆ. ಎರಡು ಗುಡ್ಡಗಳ ನಡುವೆ ಇರುವ ಕೆರೆಗೆ ಭದ್ರಾನಾಲೆಯಿಂದ ನೀರು ಬರುವಂತೆ

ಮಾಡಿರುವುದರಿಂದ ಕೆರೆಯು ಯಾವಾಗಲೂ ತುಂಬಿರುತ್ತದೆ. ಈ ಕೆರೆಯಲ್ಲಿ ಒಂದು ಬೋಟ್‌ಕ್ಲಬ್ ಆರಂಭವಾಗಲಿದೆ. ಗುಡ್ಡದ ಸುತ್ತಲೂ ಅಲ್ಲಲ್ಲೇ ಸ್ಕೌಟ್ ಶಿಕ್ಷಣಾರ್ಥಿಗಳು ಡೇರೆಗಳನ್ನು ಹಾಕಿಕೊಳ್ಳಲು ಸಿಮೆಂಟ್ ಕಟ್ಟೆಗಳು ತಯಾರಾಗಿವೆ. ಅತ್ಯುತ್ತಮವಾದ ಪೆರೇಡ್ ಗ್ರೌಂಡ್ ಮತ್ತು ಅತ್ಯಾಧುನಿಕವಾದ ಈಜುಕೊಳ (ಹರಿಹರ ಪಾಲಿಫೈಬರ್‌ನವರ ಕೊಡುಗೆ) ಈಗಾಗಲೇ ಸಿದ್ಧವಾಗಿವೆ. ಇಡೀ ಪ್ರದೇಶಕ್ಕೆ ನಲ್ಲೀ ಮೂಲಕ ಶುದ್ಧವಾದ ನೀರಿನ ಸರಬರಾಜಿಗೆ (ಶ್ರೀ ಎಂ.ಕೆ. ಪಾಣಿ ಸಹೋದರ ಶ್ರೀ ಎಂ.ಕೆ. ಸ್ವಾಮಿ ಅವರ ನೆರವಿನಿಂದ) ಏರ್ಪಾಟು ಮಾಡಿರುತ್ತಾರೆ. ಸ್ಕೌಟ್ ಕೇಂದ್ರದಿಂದ ಅನತಿ ದೂರದಲ್ಲಿ ವನರಾಸಿಯ ಮಧ್ಯದಲ್ಲಿ ಕುಷ್ಠರೋಗ ನಿವಾರಣಾ ಕೇಂದ್ರ ನಿರ್ಮಿತವಾಗಿದೆ ಮತ್ತು ಗುಡ್ಡದ ಬುಡದಲ್ಲಿರುವ ಶ್ರೀ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಹೊಂದಿಕೊಂಡು ಒಂದು ಸುಸಜ್ಜಿತ ಕಲ್ಯಾಣ ಮಂಟಪವನ್ನು ಕಟ್ಟಲಾಗಿದೆ. ಇಲ್ಲಿ ಕೇವಲ ಕೊಂಡಜ್ಜಿಯವರು ಮಾತ್ರವಲ್ಲದೆ ಸುತ್ತ-ಮುತ್ತಣ ಗ್ರಾಮದ ಜನರೂ ಬಂದು ಮಂಗಲ ಕಾರ್ಯಗಳನ್ನು ಮಾಡಿಕೊಳ್ಳಲು ಅನುಕೂಲವಿದೆ. ಈ ಎಲ್ಲ ಯೋಜನೆಗಳು ಅತಿ ಶೀಘ್ರದಲ್ಲಿ ಕಾರ್ಯಗತವಾಗಲು ಬಸಪ್ಪನವರ ನಿರಂತರ ಆಸಕ್ತಿ, ಪರಿಶ್ರಮಗಳೇ ಮುಖ್ಯ ಕಾರಣ.

ಕೆರೆಯ ಹಿಂಭಾಗದಲ್ಲಿ ಮೀನುಗಾರಿಕೆ ಇಲಾಖೆಯ ವತಿಯಿಂದ ಮೀನುಗಾರಿಕೆ ಕೇಂದ್ರ ಆರಂಭವಾಗಿದೆ. ಕೆರೆಯ ಏರಿಯ ಮೇಲೆ ಇರುವ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ದೇವಾಲಯವು ಅತ್ಯಂತ ಪುರಾತನವಾಗಿದ್ದು ಅಲ್ಲಿ ದೊರೆತಿರುವ ಶಾಸನವು ಈ ಗ್ರಾಮದ ಐತಿಹಾಸಿಕ ಮಹತ್ವವನ್ನು ಸಾರುವುದಾಗಿದೆ.

ಈ ಎಲ್ಲ ಆಕರ್ಷಣೆಗಳ ಕಾರಣದಿಂದ ಈ ಪ್ರದೇಶ ಅತ್ಯಂತ ರಮಣೀಯವಾಗಿದ್ದು ಈಗಾಗಲೇ ದಾವಣಗೆರೆ, ಹರಿಹರ ಮುಂತಾದ ಕಡೆಯಿಂದ ವಿದ್ಯಾರ್ಥಿಗಳು ಮತ್ತು ವರ್ತಕರು ವಾರಾಂತ್ಯದಲ್ಲಿ ವಿಹಾರಕ್ಕಾಗಿ ಕೊಂಡಜ್ಜಿಗೆ ಬಂದು ಈ ನಿಸರ್ಗ ಸೌಂದರ್ಯದ ನಡುವೆ ವಿಶ್ರಾಂತಿ ಪಡೆದು ಹೋಗುವ ಪರಿಪಾಠ ಆರಂಭವಾಗಿದೆ.

ಸ್ಕೌಟ್ ಕೇಂದ್ರದ ಸನಿಹದಲ್ಲಿಯೇ ಭಾವೀ ಜನಾಂಗದ ತರಪೇತಿಗಾಗಿ ಒಂದು ಆಶ್ರಮ ಮಾದರಿಯ ರೆಸಿಡೆನ್ಸಿಯಲ್ ಶಾಲೆಯನ್ನು ಆರಂಭಿಸುವ ಯೋಜನೆಯನ್ನು ಬಸಪ್ಪನವರು ಹಾಕಿಕೊಂಡಿದ್ದರು.

ಮೃದು ಸ್ವಭಾವದ ಬಸಪ್ಪನವರು ಮೊದಲಿನಿಂದಲೂ ದೈವ-ಧರ್ಮಗಳಲ್ಲಿ ಶ್ರದ್ಧೆ ಇಟ್ಟುಕೊಂಡವರು. ಅವರ ಅಜ್ಜಂದಿರಾದ ಶ್ರೀ ಭೀಮಪ್ಪನವರು ಗ್ರಾಮದ ಕೆರೆಯ ಏರಿಯ ಮೇಲಿನ ಶ್ರೀ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಸ್ವತಃ ಪೂಜಾ ಕಾರ್ಯ ನಡೆಸುತ್ತಿದ್ದರು. ಇವರ ಮನೆದೇವರಾದ ಶ್ರೀ ನಾರದಮುನೇಶ್ವರ ಸ್ವಾಮಿಯ ಕ್ಷೇತ್ರವಾದ ಚಿಗಟೇರಿಯ ಅಭಿವೃದ್ಧಿಗೂ ಬಸಪ್ಪನವರು ತುಂಬಾ ಶ್ರಮಿಸಿದ್ದಾರೆ. ಚಿಗಟೇರಿಯ ದೇವಸ್ಥಾನದ ಜೀರ್ಣೋದ್ಧಾರಕ್ಕಾಗಿ ಭಕ್ತಾದಿಗಳಿಂದ ಸಂಗ್ರಹ ಮಾಡಿ, ದೇವಸ್ಥಾನವನ್ನು ದುರಸ್ತಿಪಡಿಸಿ ವಿದ್ಯುದ್ದೀಪ ಮತ್ತು ನಲ್ಲಿಗಳನ್ನು ಹಾಕಿಸಿರುತ್ತಾರೆ. ಚಿಗಟೇರಿಗೆ ಬಂದು ಹೋಗುವ ಪ್ರಯಾಣಿಕರ ಹಾಗೂ ಭಕ್ತಾದಿಗಳ ಸೌಕರ್ಯಕ್ಕಾಗಿ ಉತ್ತಮವಾದ ರಸ್ತೆಯನ್ನು ಮಾಡಿಸಿ ದಿನನಿತ್ಯ ಬಸ್ಸುಗಳು ಬಂದು ಹೋಗುವಂತೆ ಮಾಡಿರುತ್ತಾರೆ.

ಕೊಂಡಜ್ಜಿ ಊರಿನಲ್ಲಿ ಬಸಪ್ಪನವರದ್ದಾದ ಯಾವ ಆಸ್ತಿಯೂ ಇಲ್ಲ. ಅವರ ಮಕ್ಕಳು ಮರಿ ಯಾರೂ ಇಲ್ಲಿ ನೆಲೆಸಿಯೂ ಇಲ್ಲ. ಆದರೂ ತಾವು ಹುಟ್ಟಿದ ಗ್ರಾಮ ಎಂಬ ಪ್ರೀತಿಯಿಂದ ನಾಡಿನ ಭಾವೀನಾಗರಿಕರನ್ನು ತಯಾರು ಮಾಡುವ ಮಹಾನ್ ಸಂಸ್ಥೆಯೊಂದನ್ನು ಅವರು ಇಲ್ಲಿ ಸ್ಥಾಪಿಸಿದ್ದಾರೆ. ಗ್ರಾಮದ ಜನರ ಸರ್ವಾಂಗೀಣ ಅಭಿವೃದ್ಧಿಗೆ ನೆರವಾಗಿದ್ದಾರೆ. ಅವರ ಕಾರ್ಯಕ್ಷಮತೆ ಇತರರಿಗೊಂದು ಮಾದರಿ.

**ಈ ಭೂಮೀಲಿ ನಾವು ಜೀವಿಸಿರೋದಕ್ಕೆ**
**ನಾವು ದೇವರಿಗೆ ಕೊಡುವ ಬಾಡಿಗೆ ಅಂದ್ರೆ ಇತರರಿಗೆ ಉಪಯೋಗವಾಗಿರೋದೇ.**
**- ಕೈಲಾಸಂ**

# ನಾ ಕಂಡ ಕೊಂಡಜ್ಜಿಯವರು

**ಕೆ.ಜಿ. ಮಹೇಶ್ವರಪ್ಪ**
ರಾಜ್ಯಸಭಾ ಸದಸ್ಯರು, ದಾವಣಗೆರೆ

ಶ್ರೀ ಕೊಂಡಜ್ಜಿಯವರ ಮತ್ತು ನನ್ನ ಸಂಬಂಧ ಒಂದು ವಿಶಿಷ್ಟ ರೀತಿಯದು. ವ್ಯಕ್ತಿಗತ ಸಂಬಂಧ ಅತ್ಯಂತ ನಿಕಟ ಹಾಗೂ ಸೌಹಾರ್ದಯುತವಾಗಿದ್ದರೂ ಸಹ, ರಾಜಕೀಯವಾಗಿ ವಿಭಿನ್ನ ನಿಲವು ಹಾಗೂ ಆಲೋಚನೆಗಳನ್ನು ಹೊಂದಿದ್ದೆವು. ನಾನೊಂದು ರಾಜಕೀಯ ಪಕ್ಷದಲ್ಲಿದ್ದರೆ, ಅವರೊಂದು ಪಕ್ಷದಲ್ಲಿದ್ದರು. ಅವರು ಕಾಂಗ್ರೆಸ್‌ನಲ್ಲಿದ್ದಾಗ ನನ್ನ ಬಂಧು-ಬಳಗದವರೆಲ್ಲರೂ ಕೊಂಡಜ್ಜಿಯವರ ಬೆಂಬಲಿಗರಾಗಿದ್ದರು. ನಾನು ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಅವರು ರಾಜಕೀಯ ಪ್ರವೇಶಿಸಿದರು.

ಕೊಂಡಜ್ಜಿಯವರು ಕಾನೂನು ಪದವೀಧರರಾಗಿ ವಕೀಲಿ ವೃತ್ತಿಯನ್ನು ದಾವಣಗೆರೆಯಲ್ಲಿ ಪ್ರಾರಂಭಿಸಿದರು. ಆಗ 1942ರ ಕಾಲ. ದೇಶಾದ್ಯಂತ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಉಗ್ರರೂಪದ ಚಳುವಳಿ ಮಾಡಲು ಲಕ್ಷಾಂತರ ಜನ ಸರ್ವ ತ್ಯಾಗಕ್ಕೂ ಸಿದ್ಧರಾಗಿ, ಅಂದಿನ ರಾಷ್ಟ್ರೀಯ ಕಾಂಗ್ರೆಸ್ಸಿನ ಕ್ವಿಟ್-ಇಂಡಿಯಾ ಚಳುವಳಿಯಲ್ಲಿ ಮಹಾತ್ಮಾಜಿಯವರ 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆಗೆ ಎಲ್ಲ ತ್ಯಾಗಕ್ಕೂ ಸಿದ್ಧರಾಗಿದ್ದ ಕಾಲ. ಎಲ್ಲೆಲ್ಲೂ ಕ್ರಾಂತಿ ಕಹಳೆ ಮೊಳಗುತ್ತಿದ್ದ ದಿವಸಗಳು. ಆಗ ತಾನೆ ಕೊಂಡಜ್ಜಿಯವರು ಕಂದಗಲ್ಲು ಪಟೇಲರ ಅಳಿಯಂದಿರಾಗಿ ಮತ್ತು ದಾವಣಗೆರೆ ತಾಲ್ಲೂಕಿನ ಎಲ್ಲಾ ಪ್ರಮುಖ ಗೌಡರುಗಳ ಬಂಧುವಾಗಿ ದಾವಣಗೆರೆಯಲ್ಲಿ ತಮ್ಮ ವಕೀಲಿ ವೃತ್ತಿ ಆರಂಭಿಸಿದರು. ನನ್ನ ತಂದೆಯವರಾದ ದಿ॥ ಪಟೇಲ್ ಮಹಾದೇವಪ್ಪನವರು, ಕಂದಗಲ್ ಪಟೇಲ್ ದಿ॥ ಚನ್ನಬಸಪ್ಪನವರು, ಹನುಮನಹಳ್ಳಿ ಗೌಡ್ರ ದಿ॥ ಮಹದೇವಪ್ಪನವರು, ಹಿರೇತೊಗಲೇರಿ ಸಣ್ಣಗೌಡ್ರ ದಿ॥ ಚನ್ನಬಸಪ್ಪನವರು ಇವರೆಲ್ಲರೂ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಮಾಜಿ ಸದಸ್ಯರು ಮತ್ತು ಪ್ರಭಾವಶಾಲಿ ಜನರಾಗಿದ್ದರು. ಇವರೆಲ್ಲರೂ ಮಹಾರಾಜರ ಮತ್ತು ದಿವಾನರುಗಳ ಪರಮಭಕ್ತರುಗಳಾಗಿದ್ದರು. ಈ ಎಲ್ಲ ಗೌಡರುಗಳ ಮತ್ತು ಅಧಿಕಾರಿಗಳ ಸಂಪೂರ್ಣ ಬೆಂಬಲ ಕೊಂಡಜ್ಜಿಯವರಿಗೆ ದೊರಕಿತು. ನಮ್ಮ ತಂದೆಯವರು ಮತ್ತು ಕಂದಗಲ್ ಗೌಡರು (ನಮ್ಮ ಚಿಕ್ಕಪ್ಪನವರು) ವಿಶೇಷವಾಗಿ ತಮ್ಮ ಅಳಿಯನ ರಾಜಕೀಯ ಭವಿಷ್ಯದ ಬಗ್ಗೆ ಅಭಿಮಾನದಿಂದ ಸಂಭ್ರಮದಿಂದ ನಡೆದುಕೊಂಡ ದಿನಗಳು ನನಗಿನ್ನೂ ಕಣ್ಣು ಮುಂದೆ ಕಟ್ಟಿದಂತಿದೆ. ಆ ಕಾಲ ಚುನಾವಣೆಯಲ್ಲಿ ಮತಚಲಾಯಿಸುವ ಹಕ್ಕು ಕಂದಾಯದ ಆಧಾರದ ಮೇಲಿತ್ತು. ಅನುಕೂಲಸ್ಥರೇ ರಾಜಕೀಯ ಮುಂದಾಳತ್ವ ವಹಿಸಲು ಸಾಧ್ಯವಿತ್ತು. ಪದವೀಧರರು, ವಕೀಲರು ಹೆಚ್ಚಿನ ಸಂಖ್ಯೆಯಲ್ಲಿರಲಿಲ್ಲ. ಹಿಂದುಳಿದ ವರ್ಗದವರ ನಾಯಕತ್ವದ ರಾಜಕೀಯದ ಪೈಪೋಟಿ ಇರಲಿಲ್ಲ. ಆ ವರ್ಗದ ಜನರು ಸಾಮಾನ್ಯವಾಗಿ ಲಿಂಗಾಯಿತ ಕೋಮಿನ ನಾಯಕರನ್ನೇ ಅವಲಂಬಿಸ ಬೇಕಾಗಿತ್ತು. ದೊಡ್ಡ ಅಧಿಕಾರಿಗಳ, ದೊಡ್ಡ ಗೌಡರುಗಳ ಮತ್ತು ಮಠಾಧೀಶರುಗಳ ಬೆಂಬಲ ಮತ್ತು ಸಹಾಯ ದೊರಕಿದರೆ ಸ್ಥಾನಮಾನಗಳು ಸುಲಭವಾಗಿ ದೊರಕುತ್ತಿದ್ದವು. ಈ ಎಲ್ಲಾ ಒತ್ತಡಗಳ ಕಾರಣದಿಂದ ಕೊಂಡಜ್ಜಿಯವರು ಅನಿವಾರ್ಯವಾಗಿ ಪರಿಸ್ಥಿತಿಗೆ ಮಣಿದಿರಬೇಕು. ಎಲ್ಲ ರೀತಿಯ ಶೋಷಣೆಯ ವಿರುದ್ಧ ಪ್ರತಿಭಟಿಸುವ ಧೈರ್ಯ ಅವರಿಗೆ ಪ್ರಾರಂಭದ ದಿನಗಳಲ್ಲಿರಲಿಲ್ಲ. ಬಹುಶಃ ಅದಕ್ಕೇ ತಮ್ಮ ವಿದ್ಯಾಭ್ಯಾಸವನ್ನು ಬಹಳ ಕಷ್ಟದಿಂದ ಮುಗಿಸಿದ್ದು ಕಾರಣವಿರಬಹುದು. ಆದರೂ ಪಡೆದ ಶಿಕ್ಷಣ, ಜನಪರಿಚಯ, ಜೀವನ ಸಭ್ಯತೆಗಳ ಫಲವಾಗಿ ಚಿಕ್ಕ ವಯಸ್ಸಿನಲ್ಲಿಯೇ ಜಿಲ್ಲಾ ಬೋರ್ಡು ಅಧ್ಯಕ್ಷ ಸ್ಥಾನವನ್ನು ಪಡೆದರು. ಅನೇಕ ಸಂಘ ಸಂಸ್ಥೆಗಳ ಸಂಘಟನೆ ಮಾಡಿದರು. ಯಶಸ್ವಿಯಾಗಿ ವಕೀಲಿ ವೃತ್ತಿಯನ್ನೂ ನಡೆಸಿದರು.

ನಾನು ವಕೀಲಿ ವೃತ್ತಿಯನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿದ್ದು ಶ್ರೀ ಕೊಂಡಜ್ಜಿಯವರ ಸಲಹೆ ಮೇರೆಗೆ. ನನ್ನ ವೃತ್ತಿಯಲ್ಲಿ ಯಶಸ್ಸು ಪಡೆಯಲು ಅವರು ತುಂಬಾ ಸಹಾಯ ಮಾಡಿದರು. ಅವರು ನನಗೆ ಕೊಟ್ಟ ಪ್ರೋತ್ಸಾಹ ಮತ್ತು ನನ್ನ ಮೇಲಿಟ್ಟಿದ್ದ ಪ್ರೀತಿ ವಿಶ್ವಾಸಕ್ಕೆ ನಾನು ಋಣಿಯಾಗಿದ್ದೇನೆ. ನಾನು ಬೆಂಗಳೂರಿನಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದಾಗ ಮೊದಲನೇ ವಾರದಲ್ಲೆ ಕೇಸು ಕಳುಹಿಸಿ 100 ರೂ. ಫೀಯನ್ನು ಸಹ ಕಳುಹಿಸಿದ್ದರು. ಆಗ ನನಗೆ ಅಪಾರ ಆನಂದ ಉಂಟಾಗಿ ನಾನೂ ಸಹ ದುಡಿಯಲು ಪ್ರಾರಂಭಿಸಿದೆನೆಂಬ ಆತ್ಮವಿಶ್ವಾಸ ಮೂಡಲು ಕಾರಣವಾಯಿತು.

ನಾನು ಬಹಳ ವರ್ಷಗಳಕಾಲ ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಯ ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲಿಲ್ಲ. ಅದಕ್ಕೆ ಬಹುಶಃ ಕಾರಣ ಕೊಂಡಜ್ಜಿಯವರು ಅಲ್ಲಿದ್ದುದರಿಂದ. ಮುಂದೆ ಅವರ ವಿರುದ್ಧ 1978ರಲ್ಲಿ ಲೋಕಸಭೆಗೆ ಸ್ಪರ್ಧಿಸುವುದು ಅನಿವಾರ್ಯವಾಯಿತು. ಆದಾಗ್ಯೂ ನನ್ನ ಮತ್ತು ಅವರ ಪ್ರೀತಿ ವಿಶ್ವಾಸ ಎಳ್ಳಷ್ಟು ಕಡಿಮೆಯಾಗಲಿಲ್ಲ. ಅದು ಅವರ ದೊಡ್ಡತನಕ್ಕೆ ಸಾಕ್ಷಿ. ಅವರು ಕೊಂಡಜ್ಜಿ ಗ್ರಾಮಕ್ಕೆ ಮಾಡಿರುವ ಅಭಿವೃದ್ಧಿ ಹಾಗೂ ಅಲ್ಲಿ ಸ್ಥಾಪಿಸಿರುವ ಸ್ಕೌಟ್ ತರಬೇತಿ ಕೇಂದ್ರ ಅವರ ಶಾಶ್ವತ ಕೊಡುಗೆಯಾಗಿ ಉಳಿದಿವೆ. ಅವರು ಸಲ್ಲಿಸಿದ ಪಂಚಾಯತ್‌ರಾಜ್ ಮತ್ತು ಅಧಿಕಾರ ವಿಕೇಂದ್ರೀಕರಣಕ್ಕೆ ಸಂಬಂಧಿಸಿದ ವರದಿಯು ಇಂದಿನ ಪಂಚಾಯತ್‌ರಾಜ್ ವ್ಯವಸ್ಥೆಗೆ ಸಾಕಷ್ಟು ಆಧಾರ ಒದಗಿಸಿದೆ ಮತ್ತು ಪುಷ್ಟಿ ನೀಡಿದೆ.

ಸ್ಕೌಟ್ ಕ್ಷೇತ್ರದಲ್ಲಿ, ಸಹಕಾರಿ ಕ್ಷೇತ್ರದಲ್ಲಿ, ಶಿಕ್ಷಣ ಕ್ಷೇತ್ರದಲ್ಲಿ ಅವರು ಮಾಡಿದ ಕೆಲಸ ಚಿರಸ್ಮರಣೀಯ. ಈ ಬಗ್ಗೆ ನಾನು ಹೆಚ್ಚು ಬರೆಯುವ ಅಗತ್ಯವಿಲ್ಲ. ಇದು ನಮ್ಮ ಜಿಲ್ಲೆಯಲ್ಲಿ ಮತ್ತು ರಾಜ್ಯದಲ್ಲಿ ಮನೆಮಾತಾಗಿದೆ. ಕೊಂಡಜ್ಜಿಯವರು ನಮ್ಮ ಗ್ರಾಮಕ್ಕೆ ಚಿರಸ್ಥಾಯಿಯಾಗಿರುವಂತಹ ಒಂದು ಉಪಕಾರ ಮಾಡಿದ್ದಾರೆ. ಅದೆಂದರೆ ಭದ್ರಾ ಮೇಲ್ಮಟ್ಟದ ಕಾಲುವೆಯಿಂದ ನೂರಾರು ಎಕರೆ ನೀರಾವರಿಯಾಗುವಂತೆ ಕಿರುಗಾಲುವೆಗಳನ್ನು ಮಾಡಿಸಿ ರೈತರುಗಳಿಗೆ ಅನುಕೂಲ ಕಲ್ಪಿಸಿದ್ದಾರೆ. ಅವರ ಬಗ್ಗೆ ಶ್ರೀ ನಿಜಲಿಂಗಪ್ಪನವರು ಒಂದು ಲೇಖನದಲ್ಲಿ ಹೇಳಿದ ಮಾತುಗಳನ್ನು ಪ್ರಸ್ತಾಪಿಸಿ ಈ ಲೇಖನ ಮುಗಿಸುತ್ತಿದ್ದೇನೆ.

"ಸಾರ್ವಜನಿಕ ಹಾಗೂ ರಾಜಕೀಯ ಜೀವನದಲ್ಲಿ ಯಾರೂ ಎಲ್ಲರನ್ನೂ ಮೆಚ್ಚಿಸಲಾರರು. ಕೊಂಡಜ್ಜಿಯವರು ಗಂಟುಮುಖ ಹಾಕಿದ್ದನ್ನು ನಾನೆಂದೂ ನೋಡಿರಲಿಲ್ಲ. ಸದಾ ನಗುಮುಖ. ಅವರ ವೈಯಕ್ತಿಕ ಜೀವನ ಶುದ್ಧವಾದದ್ದು, ಮೆಚ್ಚತಕ್ಕದ್ದು, ಎಲ್ಲರೂ ಒಪ್ಪತಕ್ಕದ್ದು".

---

**ರಾಜಕೀಯವು ಹೃದಯಗಳನ್ನು ದೂರಮಾಡುವಂತಹ ಶಕ್ತಿಯೇ ಹೊರತು ಒಂದುಗೂಡಿಸುವಂಥದಲ್ಲ.**

**- ವಿನೋಬಾಜಿ**

---

## ಆಚಾರವೇ ಸ್ವರ್ಗ

**ದೇವಲೋಕ ಮರ್ತ್ಯಲೋಕವೆಂಬುದು**
**ಬೇರಿಲ್ಲ ಕಾಣಿರೋ!**
**ಸತ್ಯವ ನುಡಿವುದೆ ದೇವಲೋಕ;**
**ಮಿಥ್ಯವ ನುಡಿವುದೆ ಮರ್ತ್ಯಲೋಕ;**
**ಆಚಾರವೇ ಸ್ವರ್ಗ; ಅನಾಚಾರವೇ ನರಕ**
**ಕೂಡಲಸಂಗಮದೇವಾ, ನೀವೇ ಪ್ರಮಾಣು**

**- ಬಸವಣ್ಣ**

# ಚೈತನ್ಯದ ಗಣಿ ಕೊಂಡಜ್ಜಿ

ಡಾ. ಕೆ.ಜಿ. ಗುರುಮೂರ್ತಿ
ಉಪಪ್ರಾಧ್ಯಾಪಕ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಯಾರಾದರೊಬ್ಬ ಮಹಾಪುರುಷನ ಅಥವಾ ಪರಿಪೂರ್ಣವಾದ ವ್ಯಕ್ತಿತ್ವ ಉಳ್ಳವರ ಬಗ್ಗೆ ಹೇಳುವಾಗ ಆತನಲ್ಲಿ 'ಆನೆಯ ಗಾಂಭೀರ್ಯ, ಇರುವೆಯ ಪರಿಶ್ರಮ, ಭೂಮಿಯ ತಾಳ್ಮೆ, ಮಗುವಿನ ಮುಗ್ಧತೆ' ಇದೆ ಎಂದು ಹೇಳುವುದು ಸಹಜ. ಆದರೆ ಈ ಎಲ್ಲಾ ಕಲ್ಯಾಣ ಗುಣಗಳೂ ಒಬ್ಬ ವ್ಯಕ್ತಿಯಲ್ಲಿ ಕೂಡಿರುವುದು ವಿರಳ. ಅಂತಹ ಓರ್ವ ವಿರಳ ವ್ಯಕ್ತಿ ಕೊಂಡಜ್ಜಿ ಬಸಪ್ಪನವರು. ಜೀವನದಲ್ಲಿ ಸ್ಥಾನಮಾನ, ಘನತೆ–ಗೌರವ, ಆರೋಗ್ಯ, ಅಧಿಕಾರ, ಶಾಂತಿ, ಸಮಾಧಾನ, ಅಪಾರ ಬಂಧು–ಬಳಗ ಮುಂತಾದವೆಲ್ಲವನ್ನು ಸ್ವಾಭಾವಿಕವಾಗಿ ಪಡೆದವರು ಕೆಲವರಾದರೆ, ಇವೆಲ್ಲವನ್ನೂ ಸ್ವಪ್ರಯತ್ನದಿಂದ ಗಳಿಸಿ, ಉಳಿಸಿಕೊಂಡು ಬಂದವರು ಇನ್ನೂ ಕೆಲವರು. ಕೆಲವರಿಗೆ ಸ್ಥಾನಮಾನ, ಅಧಿಕಾರ ಮುಂತಾದವು ಬದಲಾದ ಸನ್ನಿವೇಶಕ್ಕೆ ಅನುಗುಣವಾಗಿ ಅಥವಾ ಅದೃಷ್ಟವಶಾತ್ ಸಿಕ್ಕಿರಬಹುದು. ಆದರೆ ಕೊಂಡಜ್ಜಿಯವರ ಗಳಿಕೆ ಅವರ 35ಕ್ಕೂ ಮೇಲ್ಪಟ್ಟ ವರ್ಷಗಳ ಸತತ ಪರಿಶ್ರಮದಿಂದ ಹಂತ ಹಂತವಾಗಿ, ಹನಿಹನಿಯಾಗಿ ಕೂಡಿದುದರ ಫಲ; ಜನ್ಮತಃ ಕುಟುಂಬದ ಪರಿಸರದಿಂದ ಪಡೆದುದಲ್ಲ.

ಹೊರ ಜಗತ್ತನ್ನು ಮುಟ್ಟಿದ, ವಿದ್ಯಾ ಸಂಸ್ಕೃತಿಗಳಿಂದ ದೂರವಾಗಿದ್ದ ಹಳ್ಳಿಯೊಂದರಲ್ಲಿ, ಮಧ್ಯಮ ವರ್ಗದ ರೈತಾಪಿ ಕುಟುಂಬದಲ್ಲಿ ಐದು ಮಕ್ಕಳಲ್ಲಿ ಒಬ್ಬರಾಗಿ 1915ನೇ ಡಿಸೆಂಬರ್ 11ರಂದು ಶ್ರೀ ಕೊಂಡಜ್ಜಿಯವರು ಹುಟ್ಟಿದರು. ತಮ್ಮ ಪರಿಶ್ರಮದ ಫಲದಿಂದ ಮಲೇಬೆನ್ನೂರು, ದಾವಣಗೆರೆ, ಮುಂದೆ ಬೆಂಗಳೂರಿನಲ್ಲಿ ಓದಿ, ಬಿ.ಎಸ್ಸಿ. ಪದವಿ ಪಡೆದು ಪೂನಾ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಗಳಿಸಿದರು. ದಾವಣಗೆರೆಯಲ್ಲಿ ತಮ್ಮ ವಕಾಲತ್ ಪ್ರಾರಂಭಿಸಿದಂದಿನಿಂದಲೂ ರಾಜಕೀಯ ಅಂಟಿ ಬಂದಿತು. 1946ರಲ್ಲಿ ಇವರು ಕೇವಲ 30 ವರ್ಷ ವಯಸ್ಸಿನವರಿರುವಾಗಲೇ ಚಿತ್ರದುರ್ಗ ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಆ ದಿನಗಳು ನಮ್ಮ ನಾಡಿನ ರಾಜಕೀಯ ಚರಿತ್ರೆಯ ದೃಷ್ಟಿಯಿಂದ ಅತ್ಯಂತ ಕಷ್ಟಕರವಾದ ದಿನಗಳು. ಆಹಾರ, ಬಟ್ಟೆ ಮುಂತಾದ ದಿನಬಳಕೆಯ ವಸ್ತುಗಳನ್ನು ನಿಯಂತ್ರಣದಲ್ಲಿ ವಿತರಣೆ ಮಾಡುತ್ತಿದ್ದ ಕಾಲ. ದೇಶಕ್ಕೆ ಸ್ವರಾಜ್ಯದ ಉದಯವಾಗುತ್ತಿದ್ದ ಸಂಧಿಕಾಲ. ಎಲ್ಲೆಲ್ಲೂ ಅರಾಜಕತೆ, ಅನಾಯಕತ್ವ ಹೀಗೆ ದೇಶದ ಪರಿಸ್ಥಿತಿ ಇದ್ದಾಗ ಆಡಳಿತದಲ್ಲಿ ದಕ್ಷರಾಗಿ, ಜನಾನುರಾಗಿಗಳಾಗಿ, ಸರ್ಕಾರ ಮತ್ತು ಜನತೆಯ ಮನ್ನಣೆ ಪಡೆದವರು ಸ್ವಲ್ಪ ಜನ ಮಾತ್ರ. ಕೊಂಡಜ್ಜಿಯವರು ಆಗ ಮಾಡಿದ ದೇಶ ಸೇವೆಗಾಗಿ ಅವರಿಗೆ ಶ್ರೀಮನ್ ಮಹಾರಾಜರಿಂದ 1946ರಲ್ಲಿ ಬಂಗಾರದ ವಿಶೇಷ ಸೇವಾ ಪದಕ ದೊರಕಿದ್ದಿತು.

ದೇಶ ಸ್ವತಂತ್ರವಾಗಿ ಬದಲಾವಣೆಯತ್ತ ನಡೆದಾಗ ಕೊಂಡಜ್ಜಿಯವರು ಸಾರ್ವಜನಿಕ ಜೀವನದ ಅನೇಕ ಮುಖಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರು ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಮತ್ತು ಸಿಂಡಿಕೇಟ್ ಸದಸ್ಯರಾಗಿ, ಮುಂದೆ ಕೃಷಿ ಮಹಾವಿದ್ಯಾಲಯದ ಬೋರ್ಡ್ ಆಫ್ ರೀಜೆಂಟ್ಸ್‌ನ ಸದಸ್ಯರಾಗಿ ಸಲ್ಲಿಸಿದ ಸೇವೆಯನ್ನು ಯಾವ ಪ್ರಜ್ಞಾವಂತ ವಿದ್ಯಾವಂತನೂ, ಅಧಿಕಾರಿಯೂ ಮರೆಯುವಂತಿಲ್ಲ. ಇವರ ಈ ಅಧಿಕಾರ ಅವಧಿಯಲ್ಲಿ ಅನೇಕ ಕಡೆ ಮುಖ್ಯವಾಗಿ ಚಿತ್ರದುರ್ಗ ಮತ್ತು ದಾವಣಗೆರೆಗಳಲ್ಲಿ ಕಾಲೇಜುಗಳು ತೆರೆಯಲ್ಪಟ್ಟವು. ಇವರ ಪರಿಶ್ರಮದ ಕುರುಹಾಗಿ ದಾವಣಗೆರೆಯಲ್ಲಿ ಇಂದು ಒಂದು ವೃತ್ತಿ ಶಿಕ್ಷಣ ಸಂಸ್ಥೆ, ಇಂಜಿನಿಯರಿಂಗ್ ಕಾಲೇಜು ಮತ್ತು ಡಿಗ್ರಿ ಕಾಲೇಜುಗಳೂ ಸ್ಥಾಪಿತವಾಗಿವೆ. ಇವುಗಳ ಸ್ಥಾಪನೆಗೆ ಸರ್ಕಾರದಿಂದ ಸೂಕ್ತ ಧನ ಸಹಾಯ ಬಂದಾಗ, ದಾವಣಗೆರೆಯ ಶ್ರೀಮಂತರನ್ನು "ಕೆರೆಯ ನೀರನ್ನು ಕೆರೆಗೆ ಚೆಲ್ಲಿ ವರವನ್ನು ಪಡೆಯಿರಿ" ಎಂದು ಅವರ ಮನವೊಲಿಸಿ, ಲಾಭ ರೂಪದಲ್ಲಿ ಸಮಾಜದಿಂದ ಗಳಿಸಿದ ಹಣವನ್ನು ದಾನದ ರೂಪದಲ್ಲಿ ಮತ್ತೆ ಸಮಾಜದ ಸೇವೆಗೆ ಬರುವಂತೆ ಮಾಡಿದರು. ಇಂದು ದಾವಣಗೆರೆಯಲ್ಲಿಯ ಮೆಡಿಕಲ್ ಕಾಲೇಜ್ ಸೇರಿ ಎಲ್ಲ ವಿದ್ಯಾ ಸಂಸ್ಥೆಗಳ ಮತ್ತು ಆಸ್ಪತ್ರೆಗಳ ಅಸ್ತಿತ್ವದಲ್ಲಿ ಕೊಂಡಜ್ಜಿಯವರ ಪ್ರಯತ್ನವಿರುವುದು ಎಲ್ಲರಿಗೂ ತಿಳಿದ ವಿಷಯ.

ಕೊಂಡಜ್ಜಿಯವರ ವ್ಯಕ್ತಿತ್ವದ ಯಾವೊಂದು ಮುಖವನ್ನು ನಾವು ಗಣನೆಗೆ ತೆಗೆದುಕೊಂಡರೂ ಉನ್ನತವಾಗಿದೆ. ಇವರು ಅಧಿಕಾರದಲ್ಲಿದ್ದಾಗ ಅದರಿಂದ ಹೊರ ಬಂದಾಗ, ಒಂದೇ ತೆರನಾದ ನಡವಳಿಕೆಯನ್ನುಳ್ಳವರೆನ್ನಬಹುದು. ಅನೇಕ ವೇಳೆ ತಾವು ಅಧಿಕಾರದಲ್ಲಿದ್ದಾಗಲೇ ಜನಸಾಮಾನ್ಯರೊಡನೆ ಆಪ್ತರಿಷ್ಟರೊಡನೆ ಹೆಚ್ಚಿಗೆ ಬೆರೆಯಲು, ಇರಲು ಅನುಕೂಲವಾಗುತ್ತದೆ ಎನ್ನುತ್ತಾರೆ. ಅವರು ಅಧಿಕಾರದಲ್ಲಿದ್ದಾಗ ಯಾರೊಬ್ಬರಿಗೂ ಇದರ ಅರಿವನ್ನು ತೋರಿಸಲಿಲ್ಲ. ಇದನ್ನು ಅವರೊಡನೆ ಸೇವೆ ಸಲ್ಲಿಸಿದ ಅಧಿಕಾರಿಗಳಿಂದ, ಅವರ ನಿಕಟ ವರ್ತಿಗಳಿಂದ ತಿಳಿಯಬಹುದು. ಯಾವ ವ್ಯಕ್ತಿಯೇ ಆಗಲಿ ಒಮ್ಮೆ ಅವರ ಸಂಪರ್ಕಕ್ಕೆ ಬಂದರೆಂದರೆ ಇವರ ಪರಿಪೂರ್ಣ ವ್ಯಕ್ತಿತ್ವದ ಸೆಳೆತಕ್ಕೆ ಸಿಕ್ಕು ತಮ್ಮ ಜೀವಮಾನದಲ್ಲೇ ಇವರನ್ನು ಮರೆಯುವಂತಿಲ್ಲ. ಇವರನ್ನು ಕಾಣಲು ಬಂದ ಅಧಿಕಾರಿಗಳಿಗೆ ಮತ್ತು ಜನಸಾಮಾನ್ಯರಿಗೆ ಯಾವಾಗಲೂ ಸವಿಮಾತಿನ, ಕ್ಷೇಮ ಸಮಾಚಾರದ, ವೈಯಕ್ತಿಕ ತೊಂದರೆಗಳ ಬಗ್ಗೆ ವಿಚಾರಣೆಯಾದ ನಂತರ ಉಳಿದ ಕಾರ್ಯಗಳ ಬಗ್ಗೆ ವಿಚಾರಣೆ. ಅಧಿಕಾರಿಗಳಿಗೆ ತಮ್ಮ ಕಾರ್ಯಾಚರಣೆಯಲ್ಲಿ ಅನೇಕ ತೊಡಕುಗಳಿರುತ್ತವೆಂಬುದನ್ನು ತಿಳಿದಿದ್ದ ಕೊಂಡಜ್ಜಿಯವರು ಅವರನ್ನು "ನನಗೆ ಅದು ಮಾಡಿ, ಇದು ಮಾಡಿ" ಎಂದು ಎಂದೂ ಪೀಡಿಸಲಿಲ್ಲ. ಸಾರ್ವಜನಿಕ ಆಡಳಿತದಲ್ಲಿ ಇದೊಂದು ಹೊಸ ತಿರುವನ್ನು ತಂದುದರಿಂದ ಇವರೊಡನೆ ಸಂಪರ್ಕ ಹೊಂದಿದ ಅಧಿಕಾರಿಗಳಲ್ಲಿ ಒಂದು ಗೌರವ ಭಾವನೆ ಬೆಳೆದು ಬಂದಿದೆ. ಈ ಸಂಬಂಧವಾಗಿ ಅನೇಕ ಉದಾಹರಣೆಗಳನ್ನು ಇಲ್ಲಿ ಪ್ರಸ್ತಾಪಿಸಬಹುದೆಂದು ಕಾಣುತ್ತದೆ. ರಾಜ್ಯದಲ್ಲಿ ಸಚಿವರಾಗಿದ್ದಾಗ ಪ್ರವಾಸದ ಮೇಲೆ ಧಾರವಾಡಕ್ಕೆ ಬಂದಿದ್ದರು. ಎಲ್ಲ ಸಚಿವರಂತೆ ನಗರವಲಯದಿಂದ ಗೌರವ ರಕ್ಷೆಯಲ್ಲಿ ಕರೆತಂದು, ಹೋಗುವಾಗ ಅವರನ್ನು ನಗರದ ಎಲ್ಲೆಯವರೆಗೂ ಬಿಡುವ ಅಂದಿನ ಪೋಲೀಸ್ ಇಲಾಖೆಯವರ ರೂಢಿಯಿಂದ ಇವರಿಗೂ ಈ ಗೌರವ ರಕ್ಷೆ ಸಿಕ್ಕಿತು. ಆದರೆ, ಇವರು ಧಾರವಾಡ ಬಿಡುವಾಗ ತಮ್ಮ ಕಾರನ್ನು ನಿಲ್ಲಿಸಿ ತಮಗೆ ಈ ಗೌರವ ನೀಡಿದ ಇಬ್ಬರು ಸಬ್‌ಇನ್ಸ್‌ಪೆಕ್ಟರುಗಳ ಕೈಕುಲುಕಿ ಅವರು ನೀಡಿದ ಗೌರವಕ್ಕೆ ವಂದಿಸಿ, ತಮ್ಮ ವಂದನೆಗಳನ್ನು ಪೋಲೀಸ್ ಸೂಪರಿಂಟೆಂಡೆಂಟ್‌ರವರಿಗೂ ತಿಳಿಸುವಂತೆ ಹೇಳಿ ಮುಂದೆ ಹೋದರು. ಆ ಅಧಿಕಾರಿಗಳು ಪೊಲೀಸ್ ವಲಯದಲ್ಲಿ ಇದೊಂದು ವಿಶೇಷ ಸುದ್ದಿಯಾಗಿ ಕೊಂಡಜ್ಜಿಯವರ ಬಗ್ಗೆ ಅವರೆಲ್ಲರಿಗೂ ಒಂದು ಗೌರವ ಭಾವನೆ ಮೂಡಿತು.

ಕೊಂಡಜ್ಜಿಯವರು ಅಧಿಕಾರಕ್ಕೆ, ಹಣಕ್ಕೆ, ಸ್ಥಾನಕ್ಕೆ ಬೆಲೆಕೊಡದೆ ಸಮಾಜ ಸೇವೆಗೆ, ನ್ಯಾಯಕ್ಕೆ ಮಹತ್ವ ನೀಡುತ್ತಾ ಬಂದಿದ್ದಾರೆ. ಇವರಿಗೆ ವೃಥಾ ಕಾಲಹರಣ ಮಾಡುವುದೆಂದರೆ ತಿಳಿಯದು. ಮತ್ತು ಎಲ್ಲರೂ ತಮ್ಮ ಅಮೂಲ್ಯವಾದ ಕಾಲವನ್ನು ಸದುಪಯೋಗಪಡಿಸಿಕೊಳ್ಳಬೇಕೆಂಬುದೇ ಇವರ ಭಾವನೆ. ಇಂದು ಸಾರ್ವಜನಿಕ ಜೀವನದಲ್ಲಿ ಅದರಲ್ಲೂ ಸಚಿವರಾದರು. ದೊಡ್ಡ ದೊಡ್ಡ ಸ್ಥಾನದಲ್ಲಿರುವವರು ಕೆಲವು ಸಾಧನೆಗಳಿಗೆ, ಕೂಟಗಳಿಗೆ ಗಂಟೆಗಟ್ಟಲೆ ತಡವಾಗಿ ಬರುವುದು ತಮಗಾಗಿ ಕಾಯುತ್ತಿರುವವರನ್ನು ಮಿತಿಮೀರಿ ಕಾಯುವಂತೆ ಮಾಡುವುದನ್ನು ಒಂದು ಹೆಮ್ಮೆಪಡುವ ವಿಷಯವನ್ನಾಗಿ ಮಾಡಿಕೊಂಡಿದ್ದಾರೆ. ಆದರೆ ಕೊಂಡಜ್ಜಿಯವರು ಯಾವಾಗಲೂ, ಯಾವ ಕಾರ್ಯಕ್ರಮಕ್ಕೂ ವಿಳಂಬ ಮಾಡಿ ಬರುವುದಿಲ್ಲ. ಒಂದು ವೇಳೆ ತಡವಾಗುವುದು ಕಂಡುಬಂದಲ್ಲಿ ಈ ವಿಷಯವನ್ನು ತಮ್ಮ ಬರುವಿಗಾಗಿ ಕಾದಿರುವವರಿಗೆ ಅತ್ಯಂತ ಆಸ್ಥೆಯಿಂದ ಮುಂಚಿತವಾಗಿಯೇ ತಿಳಿಸಿಬಿಡುತ್ತಾರೆ. ಸಚಿವರಾಗಿ ಪ್ರವಾಸ ಮಾಡುತ್ತಿದ್ದಾಗಲೂ ಅವರು ಅಧಿಕಾರಿಗಳು ವೃಥಾ ಬಂದು ತಮಗಾಗಿ ಕಾಯುವುದನ್ನು ಇಷ್ಟಪಡುತ್ತಿರಲಿಲ್ಲ. ಕೇಂದ್ರದಲ್ಲಿ ಸಚಿವರಾಗಿದ್ದಾಗ ಹುಬ್ಬಳ್ಳಿ ಮಾರ್ಗವಾಗಿ ಬೆಳಗಾಂಗೆ ಹೋಗಬೇಕಿದ್ದ ಇವರು ಹುಬ್ಬಳ್ಳಿಯಲ್ಲಿ ತಂಗುವ ಕಾರ್ಯಕ್ರಮವಿತ್ತೇ ವಿನಃ ಯಾವ ಅಧಿಕೃತ ಕಾರ್ಯಕ್ರಮವಿರಲಿಲ್ಲ. ಆದರೂ ರೂಢಿಯಂತೆ ಕಾಣಲು ಬಂದಿದ್ದ ಅಧಿಕಾರಿಗಳೊಡನೆ ಕೆಲವು ವಿಷಯಗಳ ಬಗ್ಗೆ ಚರ್ಚಿಸಿ ಅವರನ್ನು ಬೀಳ್ಕೊಡುವಾಗ "ನಾನು ಬೆಳಿಗ್ಗೆ 8ಕ್ಕೆ ಇಲ್ಲಿಂದ ಬಿಡುತ್ತೇನೆ, ನೀವಾರೂ ತೊಂದರೆ ತೆಗೆದುಕೊಂಡು ಬರುವುದು ಬೇಡ" ಎಂದು ಸ್ಪಷ್ಟವಾಗಿ ಹೇಳಿಯೇ ಬಿಟ್ಟರು. ಆಗಿಂದಾಗ ಬಂದು ಹೋಗುವ ಸಚಿವರನ್ನು ಕಾಯುತ್ತ ಹುಬ್ಬಳ್ಳಿ ಮುಂತಾದ ಪ್ರಮುಖ ನಗರದಲ್ಲಿರುವ ಹಿರಿಯ ಅಧಿಕಾರಿಗಳು ಎಷ್ಟು ಕಾಲ, ಹಣ ಮತ್ತು ಶ್ರಮವನ್ನು ವ್ಯಯಮಾಡುತ್ತಾರೆನ್ನುವ ಕಲ್ಪನೆ ಸ್ವತಃ ಆಡಳಿತದ ಅನುಭವವಾದ ಶ್ರೀ ಕೊಂಡಜ್ಜಿಯವರಿಗೆ ಇದ್ದಿತು.

ಒಂದು ಸಾರಿ ಕೊಂಡಜ್ಜಿಯವರು ಬೆಳಗಾಂನಿಂದ ದಾವಣಗೆರೆಗೆ ಹೋಗುತ್ತಿದ್ದಾಗ ಸಂಭವಿಸಿದ ಒಂದು ಪ್ರಸಂಗ ಇವರು ಪ್ರಚಾರ ಪ್ರಿಯರಲ್ಲ ಮತ್ತು ಇತರರ ಕಾಲಕ್ಕೂ ಎಷ್ಟು ಮಹತ್ವ ಕೊಡುತ್ತಾರೆನ್ನುವುದನ್ನು ತೋರಿಸುತ್ತದೆ. ಮಾರ್ಗಮಧ್ಯದಲ್ಲಿ ಇವರಿಗೆಂದು ಕೊಟ್ಟ ಸರ್ಕಾರಿ ಕಾರು ಕೆಟ್ಟು

ನಿಂತು ಇದರ ರಿಪೇರಿಗೆ 2–3 ಗಂಟೆಗಳೇ ಬೇಕೆಂದು ಕಂಡುಬಂದಾಗ ಆ ಮಾರ್ಗದಲ್ಲಿ ಹೋಗುವ ಯಾವುದಾದರೂ ವಾಹನದಲ್ಲಿ ಜಾಗವಿರಲಿಲ್ಲ. ಕೊನೆಗೆ ಒಬ್ಬ ಲಾರಿಯವನು ಇವರನ್ನು ಕರೆದೊಯ್ಯಲು ಒಪ್ಪಿದನು. ದಾವಣಗೆರೆಯಲ್ಲಿ ಇವರ ಬರುವಿಗಾಗಿ ಕಾಯ್ದು ನಿಂತಿದ್ದ ಅಭಿಮಾನಿಗಳ ಮುಂದೆ ಲಾರಿಯಿಂದ ಕೊಂಡಜ್ಜಿಯವರು ಮತ್ತು ಅವರ ಶ್ರೀಮತಿಯವರು ಇಳಿದಾಗ ಅವರೆಲ್ಲರಿಗೂ ಆಶ್ಚರ್ಯವಾಯಿತು. ಇದಾವುದನ್ನೂ ತೋರಗೊಡದೆ "ದಾರಿಯಲ್ಲಿ ಕಾರು ಕೆಟ್ಟು ನಿಂತಿತು. ನೀವೆಲ್ಲಾ ಕಾಯುತ್ತೀರೆಂದು ಲಾರಿಯಲ್ಲಿ ಬಂದು ಬಿಟ್ಟೆ" ಎಂದು, ಲಾರಿಯವನಿಗೆ ವಂದಿಸಿ, ಜನರ ಗುಂಪಿನಲ್ಲಿ ಸೇರಿಕೊಂಡರು. ಸಚಿವರು ಲಾರಿಯಲ್ಲಿ ಮಾಡಿದ ಸುಮಾರು 60 ಮೈಲಿಗಳ ದೂರದ ಈ ಪ್ರವಾಸದ ಬಗ್ಗೆ ಎಲ್ಲೂ ಈ ಹಿಂದೆ ಪ್ರಕಟವಾಗದಿದ್ದು ಇಂದು ನಾನು ಬರೆದುದನ್ನು ಓದುವವರಿಗೆ ಆಶ್ಚರ್ಯವಾಗಬಹುದು. ಆದರೆ ಕೊಂಡಜ್ಜಿಯವರು ಇಂಥ ಪ್ರಚಾರಗಳನ್ನು ಎಂದೂ ಬಯಸಿದವರಲ್ಲ.

ಸಚಿವರು ಅಥವಾ ಅಧಿಕಾರದಲ್ಲಿರುವವರು ಎಂದಮೇಲೆ ಅವರನ್ನು ಕಾಣಬರುವವರೂ ಅನೇಕರು ಮತ್ತು ಅದರ ಹಿನ್ನೆಲೆ ಮತ್ತು ಕಾಣಬರುವ ಉದ್ದೇಶಗಳೂ ವಿವಿಧವಿರುತ್ತವೆ. ಆದರೆ ಕೊಂಡಜ್ಜಿಯವರನ್ನು ಕಾಣಬರುವವರನ್ನು ಅವರ ಆತ್ಮೀಯರೆಂದು ಒಂದೇ ಗುಂಪು ಮಾಡಬಹುದು. ಏಕೆಂದರೆ ಇವರನ್ನು ಕಾಣಲು ಬಂದ ಅಧಿಕಾರಿಗಳು, ಸಂಬಂಧಿಕರು, ಸಹಕಾರಿಗಳು, ಸ್ನೇಹಿತರು ಎಲ್ಲರನ್ನೂ ಅವರು ಒಂದೇ ರೀತಿಯಲ್ಲಿ ಕಾಣುತ್ತಿದ್ದರು. ಎಲ್ಲರೊಡನೆಯೂ ಕುಶಲ ಸಂಭಾಷಣೆ, ಕ್ಷೇಮ ಸಮಾಚಾರ ವಿನಿಮಯ ಮಕ್ಕಳ ವಿದ್ಯಾಪ್ರಗತಿ. ಹೀಗೆ ಅನೇಕ ಸಾರಿ ಅಧಿಕಾರಿಗಳಿಗೆ ಇವು ಅಧಿಕೃತ ಸಂದರ್ಶಿಗಳಾಗದೆ ವೈಯಕ್ತಿಕ ಕಷ್ಟ–ಸುಖಗಳನ್ನು ಹೇಳಿ ನಿವಾರಣೆಗಳನ್ನು ಪಡೆಯುವ ಸಂದರ್ಶನಗಳಾಗಿ ಬಿಡುತ್ತಿದ್ದವು. ಈ ವೈಯಕ್ತಿಕ ಸಂಬಂಧಗಳಿಂದ ಮತ್ತು ಇವರು ಹೋಟೆಲ್ ಮುಂತಾದ ಕಡೆ ಊಟ–ತಿಂಡಿಗಳನ್ನು ತೆಗೆದುಕೊಳ್ಳುವುದಿಲ್ಲ ವೆಂದು ತಿಳಿದಿದ್ದ ಕೊಂಡಜ್ಜಿಯವರ ಅಪಾರ ಬಂಧು–ಬಳಗ ಇವರಿಗಾಗಿ ಏನಾದರೊಂದು ವಿಶೇಷ ಮಾಡಿ ಕಾಯುತ್ತಿದ್ದರು. ಒಮ್ಮೆ ಇವರೊಡನೆ ಬೆಂಗಳೂರಿನಿಂದ ಬೆಳಗಾಂವರೆಗೆ ಪ್ರವಾಸ ಹೊರಟವರೊಬ್ಬರು ನಗುತ್ತಾ, "ಕೊಂಡಜ್ಜಿ ನೀವು ಯಾವ ನಕ್ಷತ್ರದಲ್ಲಿ ಹುಟ್ಟಿದ್ದೀರಿ? ಹೋದಲ್ಲೆಲ್ಲಾ ಉತ್ತಮ ಊಟ–ತಿಂಡಿಗೆ ಕೊರತೆ ಇಲ್ಲ, ಆದರೆ ನನ್ನಂಥವರಿಗೆ ತಿಂದೂ ತಿಂದೂ ಸಂಕಟಕ್ಕೆ ಬಂದಿದೆ" ಎಂದಾಗ ಎಲ್ಲರೊಡನೆ ಕೊಂಡಜ್ಜಿಯವರೂ ಮನಸಾರೆ ನಕ್ಕರು.

ಕೊಂಡಜ್ಜಿಯವರ ಜೀವನದುದ್ದಕ್ಕೂ ಅಂಟಿಕೊಂಡು ಬಂದ ಇನ್ನೊಂದು ನಂಟೆಂದರೆ ಯುವಜನ. ಸ್ಕೌಟ್ ಸಂಸ್ಥೆಯಲ್ಲಿ ಅಸಿಸ್ಟೆಂಟ್ ಜಿಲ್ಲಾ ಕಮೀಷನರ್ ಆಗಿ ಮುಂದೆ ಸ್ಟೇಟ್ ಚೀಫ್ ಕಮಿಷನರ್ ಆಗಿರುವ ಈವರೆಗೆ ಅವರು ಯುವಜನರೊಡನೆ ನಿಕಟ ಸಂಬಂಧ'ವನ್ನಿಟ್ಟುಕೊಂಡು ಬಂದಿದ್ದಾರೆ. ಯುವಜನರೊಡನೆ ಬೆರೆಯುವುದು, ಅವರ ಕೈಲಾದ ಸೇವೆ ಮಾಡುವ ಯಾವೊಂದು ಅವಕಾಶವನ್ನು ಇವರು ಕಳೆದುಕೊಳ್ಳಲಿಲ್ಲ. ಯುವಜನರೊಡನಿದ್ದಾಗ ಇವರಿಗೆ ತಮ್ಮ ವಯಸ್ಸಿನ, ಸ್ಥಾನದ ಅರಿವೇ ಮರೆತು ಹೋಗಿ ಅವರೊಡನೆ ತಾವೂ ಒಬ್ಬರಾಗಿಬಿಡುತ್ತಾರೆ. 1973ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ 13ನೇ ರಾಜ್ಯಮಟ್ಟದ ರ್‍ಯಾಲಿಯಲ್ಲಿ ಶ್ರೀ ಕೊಂಡಜ್ಜಿಯವರು ಮಾಡುತ್ತಿದ್ದ ಕಾರ್ಯಚಟುವಟಿಕೆಗಳನ್ನು ನೋಡಿ ಅನೇಕರು ಬೆರಗಾದರು. ರ್‍ಯಾಲಿ ಪ್ರಾರಂಭವಾಗುವ ಒಂದು ದಿನ ಮೊದಲೇ ಬಂದು ಅದು ಮುಗಿದ ಮರುದಿನದವರೆಗೂ ಎಲ್ಲಿ ನೋಡಿದರೂ ಇವರದೇ ದರ್ಶನ, ಇವರದೇ ಮಾತು. ರ್‍ಯಾಲಿಯಲ್ಲಿ ನನಗೆ ಕೊಡಲಾಗಿದ್ದ ಒಂದು ಅಧಿಕಾರ ಸ್ಥಾನದಿಂದ ರಾತ್ರಿ ಎಲ್ಲರೂ ಮಲಗಿದ ನಂತರ ಮಲಗುವ ಮತ್ತು ಬೆಳಿಗ್ಗೆ ಎಲ್ಲರಿಗಿಂತಲೂ ಮುಂಚೆ ಏಳುವ ಜವಾಬ್ದಾರಿ ಇತ್ತು. ಆದರೆ ಯಾವ ದಿನವೂ ನನಗೆ ಈ ಹೆಮ್ಮೆಪಡುವ ಅವಕಾಶ ಸಿಗಲಿಲ್ಲ. ಏಕೆಂದರೆ ನಮ್ಮೆಲ್ಲರನ್ನೂ ಮಲಗಲು ಕಳುಹಿಸಿ, ನಂತರ ರ್‍ಯಾಲಿಯ ಎಲ್ಲಾ ಕಡೆ ಒಂದು ಸುತ್ತು ಹಾಕಿ ತಾವು ಮಲಗಲು ಹೋಗುತ್ತಿದ್ದರು. ನಾನು ಎಷ್ಟೇ ಬೇಗ ಎದ್ದಿದ್ದೇನೆಂದು ಹೊರಗೆ ಬಂದರೂ ಆಗಲೇ ಕೊಂಡಜ್ಜಿಯವರು ಅಲ್ಲಿ ಬಂದಿರುತ್ತಿದ್ದರು. ಇವರ ಈ ಪರಿಶ್ರಮ, ನಿಷ್ಠೆ ಯಾವ ತರುಣನನ್ನೂ ನಾಚಿಸುವಂತಹದು. ರ್‍ಯಾಲಿಯ ಅಂಗವಾಗಿ ಸುಮಾರು 4 ಸಾವಿರ ಜನ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ 13 ಕಿಲೋಮೀಟರ್ ಉದ್ದದ ಪಾದಯಾತ್ರೆ ನಡೆದಿತ್ತು. ಹುಬ್ಬಳ್ಳಿಯ ಪ್ರಮುಖ ಬೀದಿಗಳಲ್ಲಿ ಹಾಯ್ದು ಬಂದ ಈ ದೂರವನ್ನು ಎಲ್ಲರೂ ನಡೆದೇ ಮುಗಿಸಿದರು. ಇಡೀ ದಿನ ಶ್ರಮ ವಹಿಸಿದ್ದ ಕೊಂಡಜ್ಜಿಯವರಿಗೆ ಕಾರಿನಲ್ಲಿ ಬರಲು ಯಾರು ಎಷ್ಟು ಹೇಳಿದರೂ ಕೇಳದೆ ಮಕ್ಕಳ ಸಾಲಿನ ನಡುವೆ ನಡೆಯುತ್ತಾ ಅವರನ್ನು "ವೆಲ್ಡನ್, ವಂಡರ್‌ಫುಲ್, ಕಂಗ್ರಾಚ್ಯುಲೇಷನ್"

ಎಂದು ಹುರಿದುಂಬಿಸುತ್ತಾ ಓಡಾಡಿದ ರೀತಿ, ಎಂತಹವರಿಗೂ ಹುರುಪು ತರುವಂತಿತ್ತು. ಅಂದು ಕೊಂಡಜ್ಜಿಯವರ ಈ ಉತ್ಸಾಹಪೂರ್ಣ ಚಟುವಟಿಕೆಗಳನ್ನು ಕಂಡ ಹುಬ್ಬಳ್ಳಿ ಚೇಂಬರ್ ಆಫ್ ಕಾಮರ್ಸ್ ಅಧ್ಯಕ್ಷರಾದ ಶ್ರೀ ಆರ್.ಜಿ. ವಾಲಿಯವರು "ಕೊಂಡಜ್ಜಿಯವರ ಈ ಉತ್ಸಾಹವನ್ನು ಕಂಡು ನಾವು ತರುಣರಂತಾಗಿದ್ದೇವೆ. ಕಣ್ಣಾರೆ ಕಂಡೆವೆಂದೇ ಇದನ್ನು ನಾವು ನಂಬಬೇಕು" ಎಂದು ಕೊಂಡಾಡಿದರು.

ಕೊಂಡಜ್ಜಿಯಲ್ಲಾದ ಒಂದು ದೊಡ್ಡ ಸಮಾರಂಭಕ್ಕೆ ಅನೇಕ ಸಚಿವರು ಬಂದಿದ್ದರು. ಅಂದು ಕೊಂಡಜ್ಜಿ ಸ್ಕೌಟ್ ಕ್ಯಾಂಪ್‌ನ ವಿವಿಧ ಕಟ್ಟಡಗಳ, ಅಂಗಣಗಳ ಉದ್ಘಾಟನೆ, ಶಂಕುಸ್ಥಾಪನೆಗಳಿದ್ದವು. ಇವೆಲ್ಲದರ ಮೇಲ್ವಿಚಾರಣೆಯಲ್ಲಿ 1-2 ದಿನಗಳ ಮೊದಲಿನಿಂದಲೇ ಶ್ರಮಿಸಿದ್ದ ಕೊಂಡಜ್ಜಿಯವರು ಅಂದು ಇಡೀ ದಿನ ನಿಂತೇ ಇದ್ದರೆನ್ನಬೇಕು. ಅಂದಿನ ಕಾರ್ಯಕ್ರಮ ಮುಗಿಸಿಕೊಂಡು ನಾವೆಲ್ಲರೂ ದಾವಣಗೆರೆಯಲ್ಲಿ ಊಟಕ್ಕೆ ಬರುವುದಿತ್ತು. ಸಭೆ ಮುಗಿಸಿ ಆಯಾಸದಿಂದ ನಾವು ಊಟದ ಮನೆಯತ್ತ ನಡೆದಾಗ ಅದಾವ ಮಾಯದಿಂದಲೋ ಕೊಂಡಜ್ಜಿಯವರು ಆಗಲೇ ಬಂದು ಅಲ್ಲಿ ಊಟದ ಮೇಲ್ವಿಚಾರಣೆ ನಡೆಸಿದ್ದರು.

ಕೊಂಡಜ್ಜಿಯವರು ತಮ್ಮ ಮೃದು ಸ್ವಭಾವಕ್ಕೆ ಹೆಸರಾಗಿದ್ದರು. ಅವರಿಂದ ಅವಾಚ್ಯ ಶಬ್ದಗಳು ಬಂದಿದ್ದನ್ನು ನಾನಂತೂ ಕೇಳಿಲ್ಲ. ತಮ್ಮ ವೈಯಕ್ತಿಕ ಮತ್ತು ಸಾರ್ವಜನಿಕ ವ್ಯವಹಾರದಲ್ಲಿ ಅವರು ಎಂದೂ ಸಂಯಮವನ್ನು ಕಳೆದುಕೊಂಡವರಲ್ಲ. ಈ ಒಂದು ಅಮೂಲ್ಯ ಗುಣವನ್ನು ಇವರ 'ಅಸಹಾಯಕತೆ' ಎಂದು ತಿಳಿದವರೂ ಇದ್ದಾರೆ. ಸಾಮಾನ್ಯವಾಗಿ ಶ್ರೀ ಕೊಂಡಜ್ಜಿಯವರು ಯಾವಾಗಲೂ ಯಾರ ಮೇಲೂ ತಮ್ಮ ಅಧಿಕಾರ ಮತ್ತು ದರ್ಪ ಹೇರಲು ಹೋದವರಲ್ಲ. ಆದ್ದರಿಂದ ಸೂಕ್ತ ಸಂದರ್ಭಗಳಲ್ಲಿ ಅನ್ಯಾಯವೆಂದಕಡೆ ಅವರು ನಿರ್ದಾಕ್ಷಿಣ್ಯವಾಗಿ ನಡೆದುಕೊಂಡಿರುವುದನ್ನು ನಾನು ಕಂಡಿದ್ದೇನೆ.

ಸಾಮಾನ್ಯವಾಗಿ ಕೊಂಡಜ್ಜಿಯವರು ತಮ್ಮ ದೈಹಿಕ ಆರೋಗ್ಯದ ಜೊತೆಗೆ ಮಾನಸಿಕ ಆರೋಗ್ಯವನ್ನೂ ಉತ್ತಮವಾಗಿ ಕಾಪಾಡಿಕೊಂಡು ಬಂದಿದ್ದಾರೆ. ಅವರಿಗೆ ರಾಜಕೀಯ ಜೀವನದಲ್ಲಾದ ಏರು-ಪೇರುಗಳು ಮತ್ತಾರಿಗಾದರೂ ಆಗಿದ್ದರೆ ಅವರು ನಿಜವಾಗಿಯೂ ಧೃತಿಗೆಟ್ಟು ಹೋಗಿರುತ್ತಿದ್ದರು. ಆದರೆ ಅಂತಹ ಏರುಪೇರುಗಳಾವುದೂ ಕೊಂಡಜ್ಜಿಯವರ ಮೇಲೆ ಪರಿಣಾಮವನ್ನು ಮಾಡಲಿಲ್ಲ. ಇವರು ಯಾವ ವಿಷಯಕ್ಕೂ ತಲೆ ಬಿಸಿಮಾಡಿಕೊಂಡವರಲ್ಲ. ಅವರು ಎಂದೂ ಆಸೆ-ಆಕಾಂಕ್ಷೆಗಳನ್ನು ಹೊತ್ತು ತಮ್ಮ ಕೆಲಸ ಕಾರ್ಯಗಳನ್ನು ಪ್ರಾರಂಭಿಸಿದವರಲ್ಲ; ಆದ್ದರಿಂದ ಕೈಗೊಂಡ ಅನೇಕ ಕಾರ್ಯಗಳು ಕೈಗೂಡದಾಗಲೂ ಇವರಿಗೆ ವ್ಯಥೆ, ನಿರಾಶೆಯಾಗಲಿಲ್ಲ. ಆದ್ದರಿಂದ ಜೀವನದುದ್ದಕ್ಕೂ ಇವರು ಗಳಿಸಿದ ಅಧಿಕಾರ-ಘನತೆಗಳು ಇವರ ಬೆನ್ನಟ್ಟಿ ಬಂದವುಗಳೇ ವಿನಾ ಇವರಾಗಿ ಅವುಗಳ ಬೆನ್ನು ಹತ್ತಲಿಲ್ಲ. ಹೀಗೆ ನಾಡಿನ ಸೇವೆಯನ್ನೇ ಗುರಿಯಾಗಿಟ್ಟುಕೊಂಡು ತಮ್ಮ ಜೀವನವನ್ನೇ ಸವೆಸಿದ ಕೊಂಡಜ್ಜಿಯವರು ತಾವು ಅಲಂಕರಿಸಿದ ಯಾವ ಸ್ಥಾನದಿಂದಲೂ ವೈಯಕ್ತಿಕವಾಗಿ ಏನನ್ನೂ ಪಡೆಯಲಿಲ್ಲ. ಮಾತ್ರವಲ್ಲ; ಈ ಅನೇಕ ಸ್ಥಾನಗಳಿಗೆ ಇವರಿಂದಲೇ ಗೌರವ ಬಂದಿತೆನ್ನಬಹುದು. ಶ್ರೀ ಪಾಟೀಲ್ ಪುಟ್ಟಪ್ಪನವರು ಹೇಳುವಂತೆ ಕೊಂಡಜ್ಜಿಯವರು "ಬಂಗಾರ-ಬೆಳ್ಳಿ ಬಟ್ಟೆಯಲ್ಲಿ ಹಾಯ್ದು ಬಂದರೂ ಬೆತ್ತಲೆಯಾಗಿ ಬರುವ ಸೂಜಿಯಂತೆ" ತಮ್ಮ ಅಧಿಕಾರ ಸ್ಥಾನಗಳಿಂದ ಸ್ವಪ್ರಯೋಜನ ಅಥವಾ ಕಳಂಕವನ್ನು ಪಡೆಯದೆ ಪರಿಶುದ್ಧರಾಗಿ ಹೊರಬಂದವರು.

---

**ರಾಷ್ಟ್ರ ಸೇವೆಯ ಆದರ್ಶವನ್ನು ಹರಡಲು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಮಹತ್ವದ ಪಾತ್ರ ವಹಿಸಿದೆ.**

**- ಇಂದಿರಾಗಾಂಧಿ**

# My Association with Sri Kondajji Basappa

C.R. Mohammad Zahiruddin
*Asst. State Commissioner(S), Bangalore Division*
*Chitradurga*

*He was a good friend of our family; I was acquainted with him right from my childhood and seen him with utmost nearness. I am of the view that he was the embodiment of all virtues like simplicity, honesty, integrity and dignity. I can never forget the day when he was our State Deputy Minister for Co-operation. He sent words for me to meet him and when I met him the very first question he put to me was, "were you a Scout during your student career?" then my answer was in affirmative. Immediately he asked me to attend the Commissioners Course at Doddaballapur, as he wanted that I should be the District Commissioner. That is how I started my active involvement in the organisation.*

*When I was a Municipal Councillor of Chitradurga town, Sri Kondajji Basappa wanted me to get a suitable site in the heart of the town for Scout Office which was ultimately acquired for a minimum value. Then he gave me ideas to find out some donors for the construction of the building for the Dist. Association. I am really grateful to him and due to his timely advise, guidance and Co-operation and efforts only we were able to find out a donor and completed the project as per his desire. When this project was delayed for some time due to paucity of funds, he took me to Indian Bank, Chitradurga, met the Manager and sought for a loan to complete the project. Accordingly, the Manager recommended our case to their Head Office at Madras. In the meanwhile Sri Kondajji undertook a journey to Madras and got the loan sanctioned. He informed me from Madras that the loan was sanctioned and I should get ready for completion of the building. The moment this project was completed, he gave another idea of acquiring the vacant land situated behind the existing building for the purposes of activities. After few days, when the then Minister for Municipal Administration was camping at Chitradurga, Sri Kondajji Basappa also came to Chitradurga and took the Minister to the spot and requested him to sanction the site at a nominal value, who in turn instructed the Municipal authorities to send a resolution immediately. The same was followed up and Sri Kondajji Basappa got the Govt. order issued.*

*He was evincing lot of interest in the activities of this great Movement even though he had occupied the highest post in the Central Government. Whenever he visited any District, he used to visit the concerned District Association to enquire about the activities. Once, when he had come to Chitradurga, he made enquires about the absence of the District Surgeon. When he came to know that he was not keeping well, he straightaway walked to his residence and enquired about his health. Such was his simplicity inspite of his busy schedule.*

*As a Legal Practitioner in one of the cases, I was appearing against him. Due to some technical defect raised by me, he lost the case and congratulated me and admitted that he was not aware of that particular point.*

*His political career was also very simple. He was honest to the core for which even today the public of Karnataka remembers him with gratitude.*

*He is mainly responsible for all round development of the Barren land at Kondajji by making it a good camping site just like Besant Park near Doddaballapur. As all of us are aware, that he devoted his entire life for the activities and progress of this great movement of Scouts & Guides till he undertook his last journey to eternity, which should be written in Golden Letters in the annals of Bharat Scouts and Guides of Karnataka State.*

## MULTI-FACETED PERSONALITY

**Gandhiji was a firm believer in eradication of the abominable system of untouchability. He founded the Harijan Sevak Sangh and called the untouchables as 'Harijans' (Children of God). To set an example for others he cleaned the toilets.**

**He considered service to ailing people as service to God. At that time, leprosy patients were cast out of society and made to live in far away areas. The general belief was that this disease was a punishment for sins committed. Gandhiji undertook to remove this superstition from people's mind. He used personally to clean the wounds of Shri Parchure, who suffered from leprosy, at his Ashram in Sewagram.**

**Non-violence was his creed. According to him only the brave could practice non-violence. He made it into a powerful weapon in our struggle for freedom. But at the same time in 1942, he gave the country the mantra of 'Do or die'. He made it plain that if the choice was between violence and cowardice, he would choose the former.**

**-MAHATMA GANDHIJI**

# ನನ್ನ ತಂದೆ ಕೊಂಡಜ್ಜಿ ಬಸಪ್ಪ



**ಕೊಂಡಜ್ಜಿ ಬ. ಷಣ್ಮುಖಪ್ಪ**
ಉಪಾಧ್ಯಕ್ಷರು
ಭಾರತ್ ಸ್ಕೌಟ್ಸ್ & ಗೈಡ್ಸ್, ಕರ್ನಾಟಕ

ನನ್ನ ತಂದೆ ಕೊಂಡಜ್ಜಿ ಬಸಪ್ಪನವರು ನಿಧನರಾಗಿ 34 ವರ್ಷವಾಯ್ತು. ಸಾಮಾನ್ಯ ಹಳ್ಳಿ ಕೊಂಡಜ್ಜಿಯಲ್ಲಿ ನಿಂಗಪ್ಪ-ಹಾಲಮ್ಮ ಅವರ ಪುತ್ರನಾಗಿ ಜನಿಸಿದ ಬಾಲಕ ಬಸಪ್ಪ ಮುಂದೊಂದು ದಿನ ರಾಜ್ಯ-ರಾಷ್ಟ್ರ ಮಟ್ಟದಲ್ಲಿ ತಾನು ಜನಿಸಿದ ಗ್ರಾಮದ ಹೆಸರನ್ನು ಪ್ರಸಿದ್ಧಿಗೊಳಿಸಬಹುದೆಂದು ಯಾರೂ ಊಹಿಸಿರಲಿಲ್ಲ. ಹೆಚ್ಚಿನ ವಿದ್ಯಾಭ್ಯಾಸವಿರದವರ ಸುಪುತ್ರನಾಗಿ ಜನಿಸಿದ ಬಸಪ್ಪನವರು ಮುಂದಿನ ದಿನಮಾನಗಳಲ್ಲಿ ಕೊಂಡಜ್ಜಿ ಬಸಪ್ಪ ಎಂದೇ ರಾಜ್ಯಾದ್ಯಾಂತ ಪ್ರಸಿದ್ಧಿಯಾದರು. ಅವಿಭಕ್ತ ಕುಟುಂಬದ ಹಿನ್ನೆಲೆಯಲ್ಲಿ ಬೆಳೆದ ವಿದ್ಯಾರ್ಥಿ ಬಸಪ್ಪನವರಿಗೆ ಅಂದಿನ ದಿನಗಳಲ್ಲಿ ಸೂಕ್ತ ಮಾರ್ಗದರ್ಶನ ಹಾಗೂ ಹಣಕಾಸಿನ ಅನಾನುಕೂಲಗಳ ಮಧ್ಯೆಯೂ ತಾತ ಭೀಮಪ್ಪ ಹಾಗೂ ತಂದೆ-ನಿಂಗಪ್ಪ, ತಾಯಿ-ಹಾಲಮ್ಮ ಅವರುಗಳ ಧಾರ್ಮಿಕ ಶ್ರದ್ಧಾಭಕ್ತಿಗಳು ಬಾಲಕ ಬಸಪ್ಪನಿಗೆ ವಿದ್ಯಾಭ್ಯಾಸದಲ್ಲಿ ಮುನ್ನಡೆ ಸಾಧಿಸಲು ಸೂಕ್ತ ಮಾರ್ಗದರ್ಶನ ಮಾಡಿತು.

ಹರಿಹರ ತಾಲ್ಲೂಕು ಮಲೆಬೆನ್ನೂರಿನ ಹತ್ತಿರದ ಬಂಧುಗಳಾದ ಬೆಣ್ಣೆಹಳ್ಳಿ ಅವರ ಮನೆಯಲ್ಲಿದ್ದುಕೊಂಡು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಾಧ್ಯಮಿಕ ವಿದ್ಯಾಭ್ಯಾಸ ಮುಗಿಸಿದ ಬಸಪ್ಪ, ದಾವಣಗೆರೆ ಸರ್ಕಾರಿ ಹೈಸ್ಕೂಲಿನಲ್ಲಿ ಓದಿದ ನಂತರ, ಹೆಚ್ಚಿನ ವಿದ್ಯಾಭ್ಯಾಸಕ್ಕೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್ಸಿ. ಡಿಗ್ರಿ ಮುಗಿಸಿ, ಪೂನಾದ ಕಾನೂನು ಕಾಲೇಜಿನಲ್ಲಿ ಲಾ-ಪದವಿ ಮುಗಿಸಿ ದಾವಣಗೆರೆಯಲ್ಲಿ 1940ರಲ್ಲಿ ವಕೀಲ ವೃತ್ತಿ ಪ್ರಾರಂಭಿಸುವ ವರೆವಿಗೆ, ಸಂಘ ಸಂಸ್ಥೆಗಳ ಧನಸಹಾಯ ಹಾಗೂ ಬಂಧುಗಳಿಂದ ನೆರವನ್ನು ಪಡೆದು ವಕೀಲ ವೃತ್ತಿ ಪ್ರಾರಂಭಿಸುವ ವರೆವಿಗೂ ನಡೆದು ಬಂದದಾರಿ ಅಷ್ಟೇನೂ ಸುಗಮವಾಗಿರಲಿಲ್ಲ.

ಅವರು ನನ್ನ ತಾಯಿ ಕಂದಗಲ್‌ಗೌಡ್ರ ಚನ್ನಬಸಪ್ಪ ಅವರ ಪುತ್ರಿ ಸರ್ವಮಂಗಳಮ್ಮ ಅವರನ್ನು ವಿವಾಹವಾಗಿ ದಾವಣಗೆರೆಯಲ್ಲಿ ವಕೀಲ ವೃತ್ತಿ ಪ್ರಾರಂಭಿಸಿದ ನಂತರ ಚಿತ್ರದುರ್ಗ ಜಿಲ್ಲಾ ಬೋರ್ಡ್ ಸದಸ್ಯರಾಗಿ, ಅಧ್ಯಕ್ಷರಾಗಿ ಸಾರ್ವಜನಿಕ ಸೇವೆ ಆರಂಭಿಸಿದ ಬಸಪ್ಪನವರಿಗೆ ಸಾಮಾಜಿಕ ಸೇವಾ ಕಳಕಳಿ ಅವರ ಉಸಿರಾಗಿತ್ತು. ನಾನು 7 ವರ್ಷದ ಬಾಲಕನಾಗಿದ್ದಾಗಲೇ ಬಸಪ್ಪನವರು 7ನೇ ವಿಶ್ವಸ್ಕೌಟ್ ಜಾಂಬೂರಿಯಲ್ಲಿ ಭಾಗವಹಿಸಲು ದೂರದ ಆಸ್ಟ್ರಿಯಾ ದೇಶದ ಸಾಲ್ಸ್‌ಬರ್ಗಿಗೆ ಆರು ತಿಂಗಳ ಕಾಲ ಹಡಗಿನಲ್ಲಿ ಪ್ರಯಾಣಿಸಿ ಬಂದ ತಂದೆಯವರು ಜೀವನದ ಕೊನೆಯುಸಿರಿನವರೆವಿಗೂ ಸ್ಕೌಟ್ಸ್-ಗೈಡ್ಸ್ ಚಳುವಳಿಯ ತತ್ವ-ನೀತಿಗಳಿಗೆ ಮಾರು ಹೋಗಿ ಕರ್ನಾಟಕದಲ್ಲಿ ಚಳವಳಿಯ ಹೆಜ್ಜೆ ಗುರುತುಗಳನ್ನು ಭದ್ರ-ಬುನಾದಿ ಮೇಲೆ ಬೆಳಸುವ ಸತತ ಪ್ರಯತ್ನದಲ್ಲಿ ಯಶಸ್ವಿಯಾದರೆಂದೇ ಹೇಳಬೇಕು.

ನಮ್ಮದು ದೊಡ್ಡ ಸಂಸಾರ. 7 ಜನ ಸಹೋದರರು-ಒಬ್ಬ ತಂಗಿ, ದಿನ ನಿತ್ಯ ಮನೆಗೆ ಬಂದು ಹೋಗುವ ಸಾಕಷ್ಟು ಮಂದಿ. ಇವೆಲ್ಲವನ್ನೂ ಅತ್ಯಂತ ತಾಳ್ಮೆ ಹಾಗೂ ಜಾಗರೂಕತೆಯಿಂದ ಮುನ್ನಡೆಸಿದವರು ನನ್ನ ತಾಯಿ ಸರ್ವಮಂಗಳಮ್ಮ. ಸಾಕಷ್ಟು ಅನಾನುಕೂಲಗಳ ಮಧ್ಯೆಯೂ, ಮಕ್ಕಳ, ಬಂಧು ಬಳಗದವರ-ಸಾರ್ವಜನಿಕರ-ಕಕ್ಷಿಗಾರರ ಆಗುಹೋಗುಗಳನ್ನು ಸುಸೂತ್ರಗೊಳಿಸಿದ ಸಾಧ್ವಿಮಣಿ.

ಕರ್ನಾಟಕ ಸೆಕೆಂಡರಿ ಶಾಲೆಗಳ ಮಂಡಳಿಯ ಸದಸ್ಯರಾಗಿ, ಬೆಂಗಳೂರಿನಲ್ಲಿ, ಮೈಸೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರಾಗಿ, ಮೈಸೂರಿನಲ್ಲಿ, ಸಹಕಾರಿಕ್ಷೇತ್ರ ಹಾಗೂ ಸಾರ್ವಜನಿಕ ಜೀವನದ ಮುಖಂಡರಾಗಿ, ಚಿತ್ರದುರ್ಗ, ದಾವಣಗೆರೆಗಳಲ್ಲಿ ವಿವಿಧ ಕಾರ್ಯಕ್ಷೇತ್ರಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ನನ್ನ ತಂದೆ ಬಸಪ್ಪನವರು ವೃತ್ತಿಯಿಂದ ವಕೀಲರಾದರೂ ಪ್ರವೃತ್ತಿಯಿಂದ ಸಾಮಾಜಿಕ, ಸಾರ್ವಜನಿಕ, ಸಹಕಾರಿ ಹಾಗೂ ವಿದ್ಯಾಕ್ಷೇತ್ರಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದುರಿಂದ, ಚಿತ್ರದುರ್ಗದ ವಕೀಲ ವೃತ್ತಿಗಿಂತ ಪರ ಊರುಗಳಲ್ಲಿ ಸಾರ್ವಜನಿಕರ ಸಮಸ್ಯೆಗಳಿಗೆ ಪರಿಹಾರ ಒದಗಿಸುವುದರಲ್ಲಿ ಬಹುಕಾಲ ಕಳೆಯಬೇಕಾದ ಅನಿವಾರ್ಯತೆ ಅವರಿಗೆ ಉಂಟಾಗುತ್ತಿತ್ತು.

ಬಹಳಷ್ಟು ಸಾರಿ ಮನೆಗೆ ಬರುತ್ತಿದ್ದ ಕಕ್ಷಿಗಾರರನ್ನು ರಾತ್ರಿ ತಂಗಲು ನಮ್ಮ ಮನೆಯಲ್ಲಿ ಅವಕಾಶ ನೀಡಿ, ಅವರ ಊಟ-ವಸತಿ ಹಾಗೂ ಕೆಲವೊಮ್ಮೆ ಬಂದ ಕೆಲವು ಕಕ್ಷಿಗಾರರು ನಮ್ಮ ತಾಯಿಯವರಿಂದ ಬಸ್ ಚಾರ್ಜ್‌ಗೆ ಹಣ ಪಡೆದು-ವಕೀಲರ ಫೀಸಿನಲ್ಲಿ ಸೇರಿಸಿ ಕೊಡುವುದಾಗಿ ಹೋದ ಹಲವಾರು ಸಂಧರ್ಭಗಳು ನನ್ನ ಸ್ಮೃತಿಪಟಲದಲ್ಲಿ ದಾಖಲಾಗಿವೆ. ಇದಕ್ಕೆಲ್ಲಾ ಕಾರಣ, ವಕೀಲ ಬಸಪ್ಪನವರ ಗೈರುಹಾಜರಿ ಹಾಗೂ ಅವರ ಜೂನಿಯರ್ ಆಗಿದ್ದ ಕೊಳಹಾಳ್ ಕೆಂಚಪ್ಪನವರು ಸಂಬಂಧಪಟ್ಟ ಕೇಸನ್ನು Adjournment ಪಡೆದು ಮುಂದೂಡುವುದು. ಇಂಥ ಹಲವಾರು ಪ್ರಸಂಗಗಳು ನಡೆದಿರುವ ನೆನಪುಗಳು ನನಗಿದೆ. ಇವೆಲ್ಲವನ್ನೂ ಅಚ್ಚುಕಟ್ಟಾಗಿ ನಿರ್ವಹಿಸಿ ಮನೆಮಂದಿಯನ್ನು, ಬಂದು ಹೋದ ಕಕ್ಷಿಗಾರರುಗಳನ್ನು ಹಾಗೂ ಅತಿಥಿಗಳನ್ನು ಸಂತೃಪ್ತಿಗೊಳಿಸುವಲ್ಲಿ ಯಶಸ್ವಿಯಾದವರು ನನ್ನ ಜನ್ಮದಾತೆ ಸರ್ವಮಂಗಳಮ್ಮನವರು. ಇದೆಲ್ಲ ಆಕೆಯಿಂದ ಸಾಧ್ಯವಾದದ್ದು ತಾನು ಹುಟ್ಟಿದ ಕಂದಗಲ್‌ಗೌಡ್ರು ಚನ್ನಬಸಪ್ಪನವರ ಮನೆಯ ವಾತಾವರಣ, ಅಂದಿನ ದಿನಮಾನಗಳಲ್ಲಿ ಅತ್ಯಂತ ಪ್ರತಿಷ್ಠಿತ ಕುಟುಂಬ ಎಂದು ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಸಿದ್ದಿಯಾದ ಹಿಂದಿನ ಪ್ರಜಾಪ್ರತಿನಿಧಿ ಸಭೆಯ ಗೌರವಾನ್ವಿತ ಸದಸ್ಯರಾಗಿದ್ದ ಗೌಡ್ರು ಚನ್ನಬಸಪ್ಪನವರ ಒಬ್ಬಳೇ ಮಗಳು ನನ್ನ ತಾಯಿ.

ತಂದೆಯವರು ತಮ್ಮ ವಕೀಲ ವೃತ್ತಿಯೊಂದಿಗೆ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳಲ್ಲಿ ಮೊದಲಿನಿಂದಲೂ ಸಕ್ರಿಯವಾಗಿ ಭಾಗವಹಿಸುತ್ತಾ ಬಂದಿರುವುದನ್ನು, ಮನೆಗೆ ದಿನಂಪ್ರತಿ ಬರುತ್ತಿದ್ದ ವಿವಿಧ ಸ್ಥರಗಳ ವ್ಯಕ್ತಿಗಳನ್ನು ಅವರ ಕಷ್ಟ-ಸುಖಗಳನ್ನು ವಿಚಾರಿಸುತ್ತಿದ್ದ ರೀತಿ-ನೀತಿಗಳು, ಸಾಧ್ಯವಾದಾಗಲೆಲ್ಲಾ ಅವರ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಒದಗಿಸುವ ಬದ್ದತೆ, ರೈತರಾಗಲಿ, ಕಕ್ಷಿಗಾರರಾಗಲಿ, ಸಾರ್ವಜನಿಕರು ಯಾರೇ ಬಂದಾಗಲೂ ಅವರುಗಳ ಯೋಗಕ್ಷೇಮಗಳಲ್ಲದೆ ಪರ ಊರಿನಲ್ಲಿದ್ದರೆ ವಸತಿ, ಊಟಗಳ ವ್ಯವಸ್ಥೆ ಬಗ್ಗೆ ಸರ್ಕಾರ ಅಥವಾ ಇತರ ಸಂಘ ಸಂಸ್ಥೆಗಳು ನೀಡುವ ಹಣಕಾಸಿನ ನೆರವಿನ ಬಗ್ಗೆ ಸೂಕ್ತ ಮಾರ್ಗದರ್ಶನ ಮಾಡುವುದರೊಂದಿಗೆ, ಸಾಧ್ಯವಾದಾಗಲೆಲ್ಲಾ ದಾವಣಗೆರೆ, ಬೆಂಗಳೂರು, ಮೈಸೂರಿಗೆ ತಾವೇ ಹೋಗಿ ಅವರ ಕೆಲಸಗಳನ್ನು ಪೂರ್ತಿಗೊಳಿಸಿದ, ಸೂಕ್ತ ಮಾರ್ಗದರ್ಶನ ಮಾಡಿ ಸಮಸ್ಯೆಗಳಿಗೆ ಪರಿಹಾರ ಒದಗಿಸುವಲ್ಲಿ ಸಹಸ್ರಾರು ವಿದ್ಯಾರ್ಥಿಗಳಿಗೆ, ಪೋಷಕರುಗಳಿಗೆ ನೆರವಾಗುತ್ತಿದ್ದುದನ್ನು ಹತ್ತಿರದಿಂದ ಕಾಣುತ್ತಿದ್ದ ನಾನು, ಹಲವು ಬಾರಿ ತಂದೆಯವರ ಈ ಚಿಂತನೆಗಳಿಗೆ ಕಾರಣ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ತಾವೇ ತಮ್ಮ ವಿದ್ಯಾರ್ಥಿಜೀವನದಲ್ಲಿ ಕಂಡುಂಡ ಹಲವಾರು ನೋವು ನಲಿವುಗಳು, ಅವರ ಮುಂದಿನ ಜೀವನಕ್ಕೆ ದಾರಿ ತೋರಿತು ಎಂದು ನಂಬಿದ್ದೇನೆ. ನಮ್ಮ ಮನೆಗೆ ಬಂದಂತಹ ಬಡವ, ಬಲ್ಲಿದ, ರೈತರು, ಅನುಕೂಲಸ್ಥರನ್ನು ಕೇಳುತ್ತಿದ್ದ ಒಂದು ಪ್ರಶ್ನೆ, ನಿಮ್ಮ ಮಕ್ಕಳು, ಬಂಧುಗಳನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕೆ ಸೇರಿಸಿ ಎಂಬ ಮಾತು. ನಿಮ್ಮ ಜಮೀನು ಕಮ್ಮಿ ಇರಲಿ ಅಥವಾ ದೊಡ್ಡ ಜಮೀನ್ದಾರರಾಗಿರಲಿ-ನಿಮ್ಮ ಮನೆಯ-ಊರಿನ ಯುವಕರನ್ನು ವಿದ್ಯಾವಂತರನ್ನಾಗಿ ಮಾಡಿ ಎಂಬುದೇ ಅವರ ಸದಾಶಯವಾಗಿತ್ತು. ಸಾಧ್ಯವಾದಲ್ಲೆಲ್ಲಾ ಅವರೇ ಸಂಬಂಧಪಟ್ಟವರುಗಳಿಗೆ ದೂರವಾಣಿ ಮೂಲಕ ಮಾತನಾಡಿ, ಇವರು ಇಂಥವರು, ಇವರ ಮಗ, ಬಂಧು, ಇಂತ ಊರಿನ ವಿದ್ಯಾರ್ಥಿಗೆ ನಿಮ್ಮ ಹಾಸ್ಟೆಲ್‌ನಲ್ಲಿ ಉಚಿತ ಊಟ ವಸತಿ ನೀಡಿ ಎಂಬ ಕೋರಿಕೆಯೊಂದಿಗೆ ಸಂಬಂಧ ಪಟ್ಟವರಿಗೆ ಪತ್ರಗಳನ್ನು ನೀಡಿದ ಸಹಸ್ರಾರು ಸಂದರ್ಭಗಳನ್ನು ನಾನು ಚಿತ್ರದುರ್ಗದಲ್ಲಿ ಹೈಸ್ಕೂಲಿನ ವಿದ್ಯಾರ್ಥಿಯಾಗಿ ಸ್ವತಃ ನೋಡಿದ್ದೇನೆ. ಅದರಿಂದ ಸ್ಫೂರ್ತಿ ಪಡೆದಿದ್ದೇನೆ.

ನಾನು ಮುಂದೆ ಹೇಳಲಿಚ್ಛಿಸುವ ಹಲವಾರು ಘಟನಾವಳಿಗಳು ನನ್ನತಂದೆ ನಾಲ್ಕು ದಶಕಗಳಿಗೂ ಹೆಚ್ಚು, ಸಾರ್ವಜನಿಕ, ಸಾಮಾಜಿಕ, ಸಹಕಾರ ಹಾಗೂ ವಕೀಲ ವೃತ್ತಿ ಹಾಗೂ ಶಾಸನಸಭೆ, ಲೋಕಸಭೆಗಳ ಸದಸ್ಯತ್ವ, ಕರ್ನಾಟಕ, ಕೇಂದ್ರ ಸರ್ಕಾರಗಳಲ್ಲಿ ಸಚಿವ ಸ್ಥಾನಮಾನಗಳು, ಹಲವಾರು ಸಹಕಾರ ಸಂಘ ಸಂಸ್ಥೆಗಳ ಸ್ಥಾಪನೆ, ಅನುಕೂಲವಿಲ್ಲದವರ ಬಗ್ಗೆ ಇದ್ದ ಕಳಕಳಿ, ಜೀವನದುದ್ದಕ್ಕೂ ತಾವು ಬದುಕಿ, ಬಾಳಿದ ಅಂತರಾಷ್ಟ್ರೀಯ ಮಟ್ಟದ ಚಳವಳಿ ಸ್ಕೌಟ್ಸ್-ಗೈಡ್ಸ್ ಬೆಳವಣಿಗೆಯಲ್ಲಿ ಶ್ರಮಿಸಿದ ನಿಸ್ವಾರ್ಥ ಸೇವೆ, ತಮಗಿದ್ದ ಹಲವಾರು ವೈಯಕ್ತಿಕ ಅನಾನುಕೂಲಗಳ ಮಧ್ಯೆಯೂ ಪರರಿಗೆ, ಸಹಾಯ ಕೋರಿದವರ, ಕೋರದವರ ನೆರವಿಗೆ ಸ್ಪಂಧಿಸಿದ ರೀತಿ-ನೀತಿಗಳು, ಹಳ್ಳಿಯಿಂದ ಡೆಲ್ಲಿಯವರೆಗಿನ ದೂರದ ಪ್ರಯಾಣದ ವಿವಿಧ ಮಜಲುಗಳು, ಆಸ್ತಿ, ಹಣದ ಬಗ್ಗೆ ಇರದ ವ್ಯಾಮೋಹ, ಹಲವಾರು ವೈಯಕ್ತಿಕ ತೊಂದರೆಗಳ ನಡುವೆಯೂ ಸಾಮಾಜಿಕ ಒಳಿತಿನ ಬಗ್ಗೆ ಇದ್ದ ಕಳಕಳಿ, ಇಂದಿನ ಹಲವಾರು ಸಾಮಾಜಿಕ, ರಾಜಕೀಯ ದ್ವೇಷಾಸೂಯೆಗಳಿಗೆ, ವೈಯಕ್ತಿಕ ಆಸೆ, ಆಕ್ಷಾಂಕ್ಷೆಗಳಿಗೆ, ಹಣ, ಆಸ್ತಿ, ಅಧಿಕಾರ ಲೋಲುಪ್ತತೆಯ ಬಗ್ಗೆ ದಿನಂಪ್ರತಿ ಇಂದಿನ ವಿವಿಧ ಮಾಧ್ಯಮಗಳ ಮುಖೇನ ನೋಡುವ, ಕಾಣುವ, ಓದುವ ಸಂಗತಿಗಳೊಂದಿಗೆ ಚಿಂತಿಸಲು ಸಹಕಾರಿಯಾಗುವುದೆಂದು ನಂಬಿದ್ದೇನೆ.

ತಂದೆಯವರಿಗೆ ಅವರದೇ ಸ್ವಂತಃ ವಾಹನವಿರಲಿಲ್ಲ. ಅವರು ಗೌರವಾನ್ವಿತ ಶ್ರೀ ಸಿದ್ದವ್ವನಹಳ್ಳಿ ನಿಜಲಿಂಗಪ್ಪ ಅವರ ಸಂಪುಟದಲ್ಲಿ 1962ರಲ್ಲಿ ಉಪಸಚಿವರಾಗಿ ನೇಮಕಗೊಂಡಾಗ ಸರ್ಕಾರದ ವಾಹನದ ಸೌಲಭ್ಯವಿರಲಿಲ್ಲ. ಬೆಂಗಳೂರು ಗಾಂಧಿನಗರ ಸಿಂಡಿಕೇಟ್ ಬ್ಯಾಂಕ್ ಶಾಖೆಯ ಮೂಲಕ ರೂ.15000/–ಗಳ ಸಾಲ ಪಡೆದು ಹೊಸ ಅಂಬಾಸಡರ್ ಕಾರ್ ಪಡೆದರು. ಅಂದಿನ ಹಲವಾರು ಉಪಸಚಿವರದೂ ಇದೇ ಪರಿಸ್ಥಿತಿ.

ತಂದೆಯವರು 1971ರಲ್ಲಿ ಚಿತ್ರದುರ್ಗ ಲೋಕಸಭಾ ಕ್ಷೇತ್ರದಿಂದ ಪ್ರಥಮ ಭಾರಿಗೆ ಲೋಕಸಭೆಗೆ ಆಯ್ಕೆಯಾದಾಗ ಅವರ ವಿರುದ್ದ ಸ್ವತಂತ್ರ ಪಕ್ಷದಿಂದ ನಿಂತು ಪರಾಭವಗೊಂಡವರು ರಾಜ್ಯದ ಅತ್ಯಂತ ಗೌರವಾನ್ವಿತರಾದ ಮೈಸೂರು ಸಂಸ್ಥಾನದಲ್ಲಿ ಸಚಿವರಾಗಿದ್ದ ಚಿತ್ರದುರ್ಗ ಜಿಲ್ಲೆಯ ಜನಪ್ರಿಯ ನಾಯಕರಾದ ಜಗಲೂರಿನ ಶ್ರೀ ಮಹಮದ್ ಜೆ.ಇಮಾಮ್ ಸಾಹೇಬರು. ಆ ಸಂದರ್ಭದಲ್ಲಿ ಅವರಿಗೆ ಸೇರಿದ ಮನೆಯಲ್ಲಿ ನಾವು ಚಿತ್ರದುರ್ಗದಲ್ಲಿ ಬಾಡಿಗೆಗಿದ್ದೆವು. ಹಲವಾರು ಬಾರಿ ತಂದೆಯವರು ಶ್ರೀ ಇಮಾಮ್ ಸಾಹೇಬರಂಥ ಹಿರಿಯರು ಸೋತರಲ್ಲಾ ಎಂಬ ಚಿಂತನೆ ಅವರಲ್ಲಿತ್ತು ಹಾಗೂ ಸ್ವತಃ ಶ್ರೀ ಇಮಾಮ್ ಸಾಹೇಬರೇ ತಮ್ಮ ಪರಾಭವವನ್ನು ಸ್ವೀಕರಿಸಿದ್ದಲ್ಲದೆ ತಂದೆಯವರಿಗೆ ಶುಭಕಾಮನೆಗಳನ್ನು ನಮ್ಮ ಮನೆಗೆ ಬಂದು ತಿಳಿಸಿದ್ದನ್ನು ನೋಡಿ ವಿಸ್ಮಿತನಾದೆ.

1971ರಲ್ಲಿ ಲೋಕಸಭಾ ಸದಸ್ಯರಾಗಿದ್ದಾಗ ವಿಜಯ ಬ್ಯಾಂಕ್, ಹನುಮಂತನಗರ ಶಾಖೆಯಲ್ಲಿ ಸರ್ಕಾರದ ಸಾರಿಗೆ ಸಚಿವರಿಂದ Allot ಆದ "ಫಿಯಟ್‌ಕಾರು" ಖರೀದಿಸಲು 22,000/– ಸಾವಿರ ಸಾಲ ಪಡೆದರು. ತಿಂಗಳಿಗೆ ರೂ. 600/– ಗಳನ್ನು ಕಾರಿನ ಸಾಲಕ್ಕೆ ಕಟ್ಟಬೇಕಿತ್ತು. ಎರಡು ವರ್ಷಕಂತನ್ನು ಕಟ್ಟಿದ ನಂತರ, ಅಪೆಕ್ಸ್ ಬ್ಯಾಂಕ್ ಸೇವೆಯಲ್ಲಿದ್ದ ನನಗಾಗಲಿ, ತಂದೆಯವರಿಗಾಗಲಿ ತಿಂಗಳ ಕಂತು ಕಟ್ಟಲು ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ಕಲಾಸಿಪಾಳ್ಯದ ಬಸ್ ಮಾಲೀಕರೊಬ್ಬರಿಗೆ Premier Padmini Fiat ಕಾರನ್ನು 1975ರಲ್ಲಿ ಮಾರಾಟ ಮಾಡಿ ವಿಜಯ ಬ್ಯಾಂಕ್ ಸಾಲ ಮರುಪಾವತಿ ಮಾಡಲಾಯ್ತು. ನನ್ನ ಸಹೋದರ ಕೆ.ಬಿ.ವಿಜಯಕುಮಾರ್ ಕಾರ್ ಸಾಲ ಪಡೆದಾಗ ಹನುಮಂತನಗರದ ವಿಜಯ ಬ್ಯಾಂಕಿನಲ್ಲಿ ಸೇವೆ ಸಲ್ಲಿಸುತ್ತಿದ್ದರು.

ತಂದೆಯವರು 1971ರಲ್ಲಿ ಲೋಕಸಭಾ ಸದಸ್ಯರಾಗಿ ನವದೆಹಲಿಯ South Avenue Flat ನಲ್ಲಿದ್ದಾಗ ನನ್ನ ತಾಯಿ, ತಂಗಿ ಮಂಜುಳಾ, ಸಹೋದರರಾದ ಡಾ.ಗುರುಮೂರ್ತಿ– ಅವರ ಪತ್ನಿ ಲೀಲಾ, ವಿಜಯಕುಮಾರ್ ದೆಹಲಿಯಲ್ಲಿ ಅವರೊಂದಿಗಿದ್ದರು. 1971–1980ರ ಅವಧಿಯಲ್ಲಿ ಲೋಕಸಭಾ ಸದಸ್ಯರಾಗಿ, ಕೇಂದ್ರ ಸರ್ಕಾರದ ಉಪಸಚಿವರಾಗಿ ಅಧಿಕೃತ ನಿವಾಸಗಳಿದ್ದಾಗ್ಯೂ ನನಗೆ ಹಾಗೂ ನಮ್ಮ ಕುಟುಂಬದ ಹಲವು ಸದಸ್ಯರು ದೆಹಲಿಯತ್ತ ಮುಖಮಾಡುವ ಅವಕಾಶವಾಗಲಿಲ್ಲ.

ತಂದೆಯವರು 1962 ರಿಂದ 1980 ರವರೆವಿಗೆ ಎರಡು ಬಾರಿ ದಾವಣಗೆರೆ ಕ್ಷೇತ್ರದ ಶಾಸಕರಾಗಿ, ಚಿತ್ರದುರ್ಗ, ದಾವಣಗೆರೆ ಕ್ಷೇತ್ರಗಳಿಂದ ಎರಡುಬಾರಿ ಲೋಕಸಭಾ ಸದಸ್ಯರಾಗಿ, ರಾಜ್ಯದಲ್ಲಿ ಹಾಗೂ ಕೇಂದ್ರ ಸಂಪುಟಗಳಲ್ಲಿ ಉಪಸಚಿವರಾಗಿ ಸೇವೆ ಸಲ್ಲಿಸಿ, 1980ರ ಲೋಕಸಭಾ ವೈಪಲ್ಯದ ನಂತರ ಅವರಿಗೆ ರಾಜ್ಯದಲ್ಲಿ ಶಾಸಕರಾಗಿ, ಕೇಂದ್ರದಲ್ಲಿ ಲೋಕಸಭಾ ಸದಸ್ಯರಾಗಿ ಲಭ್ಯವಿದ್ದ ಪಿಂಚಣಿ ಸೌಲಭ್ಯಗಳು ತಿಂಗಳಿಗೆ ರೂ.450/– ಮಾತ್ರ. ಕೇಂದ್ರ ಸರ್ಕಾರದ C.G.H.S. ಆಸ್ಪತ್ರೆ ನಮ್ಮ ರಾಜಾಜಿನಗರದ ಮನೆಯ ಹತ್ತಿರವಿದ್ದರಿಂದ ಕೇಂದ್ರದಿಂದಲೇ ತಿಂಗಳಿಗೆ ರೂ.450/– ನಿವೃತ್ತಿ ಸೌಲಭ್ಯ ಅವರಿಗೆ ದೊರಕುತ್ತಿತ್ತು, ಅದನ್ನು ಅವರು ದಾವಣಗೆರೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯಿಂದ ಪಡೆಯುತ್ತಿದ್ದರು.

1982ರಲ್ಲಿ ಫೆಬ್ರವರಿಯಿಂದ–ನವಂಬರ್ ವರೆವಿಗೆ ದಾವಣಗೆರೆ ಸ್ಟೇಟ್ ಬ್ಯಾಂಕ್‌ಆಫ್ ಮೈಸೂರು ಶಾಖೆಯಲ್ಲಿನ ಖಾತೆಗೆ ಜಮಾ ಆಗುತ್ತಿದ್ದ ಪಿಂಚಣಿ ಹಣ ರೂ.450/– ನವಂಬರ್ 82ರ ಅಂತ್ಯಕ್ಕೆ ರೂ.4500/– ಆಗಿತ್ತು. 1991 ರಲ್ಲಿ ಕೊಂಡಜ್ಜಿ ಗ್ರಾಮದ ಶ್ರೀ ಆಂಜನೇಯ ಸ್ವಾಮಿಯ ದೇವಸ್ಥಾನದ ಬಳಿಯ ಶ್ರೀ ಕಾಳಿಕಾ ದೇವಿ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯಕ್ಕೆ ನಾನು ಮತ್ತು ದೊಡ್ಡಪ್ಪನವರ ಪುತ್ರ ಶ್ರೀ.ಕೆ.ದಾನಪ್ಪ ಶಾನುಭೋಗರಾದ ಶ್ರೀರಾಮರಾವ್ ಕೈಗೆತ್ತಿಕೊಂಡಾಗ ಬಡ್ಡಿ ಸೇರಿ ಎಸ್.ಬಿ.ಎಂ. ಬ್ಯಾಂಕ್‌ನಲ್ಲಿದ್ದ ಪಿಂಚಣಿ ಹಣ ರೂ.6600/ –ಗಳನ್ನು ಹಿಂಪಡೆದು ದೇಗುಲದ ಜೀರ್ಣೋದ್ದಾರಕ್ಕೆ ಬಳಸಲಾಯಿತು.

1940 ರಿಂದಲೂ ಸ್ಕೌಟ್ಸ್–ಗೈಡ್ಸ್ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದ ತಂದೆಯವರು ರಾಜ್ಯದ ಶಾಸಕರಾಗಿ, ಸಚಿವರಾಗಿ, ಲೋಕಸಭಾ ಸದಸ್ಯರಾಗಿ, ಕೇಂದ್ರದಲ್ಲಿ ಉಪಸಚಿವರಾಗಿ, ಪ್ರೊ.ಪಿ.ಶಿವಶಂಕರ್ ನೇತೃತ್ವದಲ್ಲಿ ರಾಜ್ಯ ಕಾರ್ಯದರ್ಶಿಯಾಗಿ, ನಂತರ ಪಿ.ಶಿವಶಂಕರ್ ಅವರು

ರಾಷ್ಟ್ರೀಯ ಸ್ಕೌಟ್ಸ್ ಆಯುಕ್ತರಾಗಿ ಆಯ್ಕೆಯಾದ ನಂತರ ರಾಜ್ಯ ಮುಖ್ಯ ಆಯುಕ್ತರಾಗಿ, 1964–1982 ರವರೆವಿಗೆ ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿದರು. ರಾಜ್ಯದ ಹಾಗೂ ಕೇಂದ್ರದ ಸಚಿವರಾಗಿದ್ದಾಗಲೂ, ತಮ್ಮ ಸರ್ಕಾರದ ಕಾರ್ಯಭಾರಗಳೊಂದಿಗೆ ಸದಾ ಚಿಂತಿಸುತ್ತಿದ್ದುದು, ಕರ್ನಾಟಕದೆಲ್ಲೆಡೆ ಸ್ಕೌಟ್ಸ್–ಗೈಡ್ಸ್ ಚಳವಳಿಯ ಬೆಳವಣಿಗೆ ಹಾಗೂ ಅಭಿವೃದ್ಧಿ ಬಗ್ಗೆ. ದೆಹಲಿಯಿಂದಲೇ ರಾಜ್ಯ ಕಾರ್ಯದರ್ಶಿ ಶ್ರೀ ಎ.ಡಿ.ಆನಂದನ್, ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀಮತಿ ಲಲಿತಾಕೃಷ್ಣಸ್ವಾಮಿ, ರಾಜ್ಯ ಸಂಘಟನಾಧಿಕಾರಿಗಳಾದ ಶ್ರೀ ಎಸ್.ಆದಿಕೇಶವಲು, ಶ್ರೀಮತಿ ಎಸ್.ಹಮೀದರೆಹಮಾನ್ ಹಾಗೂ ತಮ್ಮ ಗುರುಗಳಾಗಿದ್ದ ಡಾ.ಎಸ್.ಬಿ.ಕೌಶಿಕ್, ರಾಜ್ಯ ಆಯುಕ್ತರುಗಳಾದ ಶ್ರೀ ವಿ.ಪಿ.ದೀನದಯಾಳು ನಾಯ್ಡು, ಶ್ರೀಮತಿ ಎಂ.ಆರ್.ಲಕ್ಷ್ಮಮ್ಮ ಅವರುಗಳೊಂದಿಗೆ ಚರ್ಚಿಸಿ ಚಳವಳಿಯನ್ನು ರಾಜ್ಯದೆಲ್ಲೆಡೆ ಬೆಳಸುವಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದನ್ನು ಬಹಳ ಹತ್ತಿರದಿಂದ ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆ ಕಾರ್ಯದರ್ಶಿಯಾಗಿ, ರಾಜ್ಯ ಸಂಸ್ಥೆಯ ಪ್ರಕಟಣೆಗಳ ಸ್ಥಾನಿಕ ಆಯುಕ್ತನಾಗಿ, ರಾಜ್ಯಕೋಶಾಧಿಕಾರಿಯಾಗಿ, ಜಾಂಬೋರೇಟ್‌ನ ಹಾಗೂ ವಿಶೇಷ ಸಂಚಿಕೆಗಳ ಸಂಚಾಲಕನಾಗಿ ಕಂಡುಕೊಂಡಿದ್ದೇನೆ.

ದಣಿವರಿಲ್ಲದೆ ದೈಹಿಕ ಹಾಗೂ ಮಾನಸಿಕವಾಗಿ, ಸಂಪೂರ್ಣವಾಗಿ ಸಾಮಾಜಿಕ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದ ತಂದೆಯವರು, 1981ರಲ್ಲಿ Belsefalcy ಮೂಲಕ ಅನಾರೋಗ್ಯಕ್ಕೆ ತುತ್ತಾಗಿ, ನಂತರ ಆದ Strokeನಿಂದ ತೊಂದರೆಗೊಳಗಾದರು. ಆದಾಗ್ಯೂ ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆ ಚಿಕಿತ್ಸೆ ನಂತರ ಚೇತರಿಸಿಕೊಂಡರು.

ನಾಲ್ಕು ದಶಕಗಳಿಗೂ ಮೀರಿದ ಸಾರ್ವಜನಿಕ ಸೇವಾ ಜೀವನ, ವಕೀಲ ವೃತ್ತಿ, ದೊಡ್ಡ ಕುಟುಂಬದ ಹೊಣೆಗಾರಿಕೆ, ಸ್ಕೌಟ್ಸ್–ಗೈಡ್ಸ್ ಚಳವಳಿಯ ಬೆಳವಣಿಗೆ ಹಾಗೂ ಅಭಿವೃದ್ಧಿ ಇವುಗಳೊಂದಿಗೆ ಅವರ ಮತ್ತೊಂದು ಭವ್ಯವಾದ ಕನಸು ಕೊಂಡಜ್ಜಿ ಗ್ರಾಮದ ಸ್ಕೌಟ್ಸ್–ಗೈಡ್ಸ್ ತರಬೇತಿ ಕೇಂದ್ರದ ಪಕ್ಕದಲ್ಲಿನ 245 ಎಕರೆ ಜಮೀನಿನಲ್ಲಿ "Multi purpose Educational & Residential Complex" ನಿರ್ಮಾಣದ ಹೆಬ್ಬಯಕೆಯೊಂದಿಗೆ ಪ್ರಾರಂಭಿಸಿದ "ಜಲದರ್ಶನಿ ಜ್ಞಾನಪೀಠ"ದ ಸ್ಥಾಪನೆ. ಅದಕ್ಕಾಗಿ ಲೋಕಸಭಾ ಸದಸ್ಯರಾಗಿ, ಕೇಂದ್ರ ಸಚಿವರಾಗಿ ರಾಷ್ಟ್ರದ ಪ್ರತಿಷ್ಠಿತ Residential Schoolsಗಳನ್ನು ಸಂದರ್ಶಿಸಿ, J.Krishnamoorthy Foundation Hindupuraದ ಬಳಿ ಸ್ಥಾಪಿಸಿರುವ ಶಾಲೆಗೂ ತೆರಳಿ ಅಲ್ಲಿ ಪ್ರಾಂಶುಪಾಲರಾಗಿ ನಿವೃತ್ತರಾಗಿ ಬೆಂಗಳೂರಿನಲ್ಲಿದ್ದ ಶ್ರೀ ಗುಂಡುರಾವ್ ಅವರನ್ನು ಸಂಪರ್ಕಿಸಿ ಕೊಂಡಜ್ಜಿ ಗ್ರಾಮವನ್ನು ಸಂಪೂರ್ಣವಾಗಿ ಒಂದು ಪರಿಪೂರ್ಣವಾದ ವಿದ್ಯಾಕಾಶಿಯನ್ನಾಗಿ ಮಾಡಬೇಕೆಂಬ ಹಂಬಲ, ಹೆಬ್ಬಯಕೆ ಅವರಿಗಿತ್ತು. ಗ್ರಾಮಾಂತರದ ವಿದ್ಯಾರ್ಥಿಗಳನ್ನು Self-Employment ಮಾಡಬಹುದಾದ Courseಗಳನ್ನು ಸ್ಥಾಪಿಸುವುದು, ವಸತಿಗೃಹಗಳು, ಹಾಸ್ಟೆಲ್‌ಗಳಲ್ಲಿ ವಾಸಕ್ಕೆ ಲಭ್ಯತೆ, ಇವುಗಳೊಂದಿಗೆ ಅವರುಗಳಿಗೆ ಸ್ವಂತ ಉದ್ಯೋಗವಕಾಶ ಪಡೆಯುವಲ್ಲಿ ಅನುಕೂಲವಾಗಬೇಕೆಂಬ ಸದಾಶಯ ಹಾಗೂ ಅತ್ಯುತ್ತಮ ಶಿಕ್ಷಣ ಸಂಸ್ಥೆ ಸ್ಥಾಪಿಸುವ ಉದ್ದೇಶವಿತ್ತು.

ದುರಾದೃಷ್ಟವಶಾತ್ ಕೌಟುಂಬಿಕ ಸಮಸ್ಯೆಗಳು, ರಾಜಕೀಯದ ಏಳುಬೀಳುಗಳು, ದಣಿವಲ್ಲದೆ ದುಡಿದ ನಾಲ್ಕು ದಶಕಗಳನ್ನು ಮೀರಿದ ಸಾಮಾಜಿಕ ಸೇವೆಗಳು, ಅವರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟು ಮಾಡಿತ್ತು. ದಾವಣಗೆರೆಯಲ್ಲುಂಟಾದ Strokeನಿಂದ ಸಾಕಷ್ಟು ಚೇತರಿಸಿಕೊಂಡಿದ್ದ ತಂದೆಯವರು, 1982ರಲ್ಲಿ ತೀವ್ರ ಹೃದಯಾಘಾತಕ್ಕೆ ಒಳಗಾದರು. ಬೆಂಗಳೂರಿನ ಶ್ರೀ ಜಯದೇವ ಹೃದ್ರೋಗಕೇಂದ್ರದಲ್ಲಿ ಸೂಕ್ತ ಚಿಕಿತ್ಸೆ ನಂತರವೂ 14 ನವಂಬರ್ 1982ರ ಬೆಳಗಿನ ಜಾವ ಭಗವಂತನಪಾದ ಸೇರಿದರು. ಇದು ನಿಜಕ್ಕೂ ನಮ್ಮೆಲ್ಲರನ್ನೂ ದಿಗ್ಭ್ರಾಂತರನ್ನಾಗಿಸಿತು. ಅನಿರೀಕ್ಷತವಾದ ಈ ಘಟನೆ ನಮ್ಮ ಮನೆತನದ "ನಂದಾದೀಪವನ್ನೇ" ಆರಿಸಿತ್ತು. ನನ್ನ ಪಾಲಿಗಂತೂ ಇದು ಊಹಿಸಲಸಾಧ್ಯವಾದ ಪರಿಸ್ಥಿತಿಗೆ ತಳ್ಳಿತ್ತು, ಸಹಸ್ರಾರು ಸ್ನೇಹಿತರು, ಅಭಿಮಾನಿಗಳು, ರಾಜಕೀಯ ದುರೀಣರುಗಳು, ಸ್ಕೌಟ್ಸ್–ಗೈಡ್ಸ್ ಸಹೋದ್ಯೋಗಿಳು, ಬಂಧು–ಬಳಗದವರು, ಅಂತಿಮ ನಮನ ಸಲ್ಲಿಸಿದರು. ಅವರ ಪಾರ್ಥಿವ ಶರೀರವನ್ನು ತುಮಕೂರು, ಶಿರಾ, ಹಿರಿಯೂರು, ಚಿತ್ರದುರ್ಗ, ದಾವಣಗೆರೆ, ಹರಿಹರ ಹಾಗೂ ಮಾರ್ಗ ಮಧ್ಯದ ಗ್ರಾಮಗಳ ಮೂಲಕ ಸ್ಕೌಟ್ಸ್ ಕ್ಯಾಂಪಿಗೆ ತಲುಪಿದಾಗ 14 ನವಂಬರ್ ಮುಗಿದು 15 ನವಂಬರ್ ಬಂದಿತ್ತು. ಇದು ಅವರ ಜೀವನದ ಕೊನೆಯ ಪಯಣದ ಹಾದಿ. ಅವರ ಅಕಾಲ ನಿಧನ ನಮಗೆಲ್ಲಾ ದಿಗ್ಭ್ರಾಂತಿಯಾದಾಗ್ಯೂ, ಆ ಸಂದರ್ಭದಲ್ಲಿ ಸಾರ್ವಜನಿಕರು, ಸ್ಕೌಟ್ಸ್–ಗೈಡ್ಸ್ ಬಂಧುಗಳೂ, ವಿವಿಧ ಸಂಘ ಸಂಸ್ಥೆಗಳು, ಬೆಂಗಳೂರಿನಿಂದ ಕೊಂಡಜ್ಜಿಯವರೆವಿಗೆ ಅವರ ಪಾರ್ಥಿವ ಶರೀರದ ದರ್ಶನಕ್ಕೆ ವಿವಿಧ ಊರುಗಳಲ್ಲಿ ಸೇರಿದ ಜನಸ್ತೋಮ, ರಾಜ್ಯ/ ರಾಷ್ಟ್ರದೆಲ್ಲೆಡೆಯಿಂದ ಕಳುಹಿಸಿದ ಶೋಕಸಂದೇಶಗಳು,

ಹಿರಿಯರು–ಪೂಜ್ಯರುಗಳು ನೀಡಿದ ಮಾರ್ಗದರ್ಶನ ನಮಗೆಲ್ಲಾ ಸಾಂತ್ವನ ನೀಡಿತು. ಕೊಂಡಜ್ಜಿಯಲ್ಲಿ ಜನ್ಮತಾಳಿದ ಬಸಪ್ಪನವರು, ಕೊಂಡಜ್ಜಿ ಬಸಪ್ಪ ಎಂದು ಪ್ರಸಿದ್ಧಿಯಾಗಿ ಹುಟ್ಟೂರಿನಲ್ಲಿ 15 ನವಂಬರ್ 1982ರ ಬೆಳಗಿನ ಜಾವ ಮಣ್ಣಾದರು.

ಈಗಾಗಲೇ ತಂದೆಯವರ ಬಗ್ಗೆ ಜಾನಪದತಜ್ಞ, ನಾಡೋಜ, ನಮ್ಮ ಕುಲದೈವ ಶ್ರೀ ನಾರದಮುನೇಶ್ವರರ ವಾಸಸ್ಥಾನ ಚಿಗಟೇರಿಯ ಸಜ್ಜನ ಶ್ರೀ ಮುದೇನೂರು ಸಂಗಣ್ಣ ಅವರು ರಚಿಸಿರುವ "ಕೊಂಡಜ್ಜಿ ಬಸಪ್ಪ" ಗದುಗಿನ, ವೀರಶೈವ ಪುಣ್ಯಪುರುಷರ ಪ್ರಕಟಣೆ ಮಾಲೆಯಲ್ಲಿ ಪ್ರಕಟಗೊಂಡು, 2000ನೇ ಇಸವಿಯಲ್ಲಿ ಬೆಂಗಳೂರಿನ ಶ್ರೀ ತರಳಬಾಳು ಕೇಂದ್ರದ ಸಭಾಂಗಣದಲ್ಲಿ ಕರ್ನಾಟಕದ ಶ್ರೀ ಸನ್ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್.ಎಂ.ಕೃಷ್ಣ ಅವರಿಂದ ಬಿಡುಗಡೆಗೊಂಡಿದೆ. ಕಾರ್ಯಕ್ರಮದ ಸಾನಿಧ್ಯವನ್ನು ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಪರಮಪೂಜ್ಯ ಡಾ.ಶ್ರೀಶ್ರೀ ತೋಂಟದ ಸಿದ್ದಲಿಂಗ ಮಹಸ್ವಾಮಿಗಳು ವಹಿಸಿದ್ದರು, ಗ್ರಂಥಕರ್ತರಾದ ನಾಡೋಜ ಶ್ರೀ ಮುದೇನೂರು ಸಂಗಣ್ಣ ಅವರು ಹಾಗೂ ತಂದೆಯವರ ಪೂನ ಕಾನೂನು ಕಾಲೇಜು ಸಹಪಾಠಿ ನಿವೃತ್ತ ಹಿರಿಯ ಭಾ.ಆ.ಸೇ. ಅಧಿಕಾರಿ ಡಾ.ಹೆಚ್.ಎಲ್.ನಾಗೇಗೌಡ, ಅಧ್ಯಕ್ಷರು, ಕರ್ನಾಟಕ ಜಾನಪದ ಪರಿಷತ್ತು ಹಾಗೂ ಶ್ರೀ ಗೊ.ರು.ಚನ್ನಬಸಪ್ಪ ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು ಹಾಗೂ ರಾಜ್ಯದ ವಿವಿಧ ಜಿಲ್ಲೆಗಳ ಸ್ಕೌಟ್ಸ್–ಗೈಡ್ಸ್‌ಗಳು, ಬಂಧುಗಳು ಹಾಗೂ ಇತರ ರಾಜಕೀಯ ಮುಖಂಡರುಗಳು, ಸಾರ್ವಜನಿಕರು ಸಮಾರಂಭ ದಲ್ಲಿ ಭಾಗವಹಿಸಿ, ಸಮಾರಂಭವನ್ನು ಯಶಸ್ವಿಗೊಳಿಸಿದರು.

## NOW I KNOW

**Jawaharlalji was very fond of children. The children addressed him as 'Chacha Nehru'. He would mix with children easily and sometimes joked with them. Once, Nehru sent an elephant calf named "Indira" for the Russian children. One day, he was in company of children. They knew that he had sent an elephant calf to Russia. So, one child asked him, "Chacha, you send out animals, why don't you send some of us". Nehru replied in mock seriousness, "Oh, I never knew that you people are animals".**

**The children burst into loud laughter as they comprehended Nehru's joke.**

**- PANDITH JAWAHARLAL NEHRU**

## WINNING POINT

**This incident relates to the period when Lincoln was practicing as a lawyer. A man approached him with the documents to his case as he wanted Lincoln to be his lawyer. After examining the documents, Lincoln said, "Your case can be won on legal points".**

**Then he abruptly returned the documents to the client and added, "It is impossible to win this case from the point of view of truth. I suggest you engage another lawyer. If I take up this case, the fact that it is a false case will always rumble in my mind and I will be under constant pressure that I am speaking a lie in the court. It is quite possible that I may say so in the court and then you will lose the case".**

**- ABRAHAM LINCOLN**

# ಕೊಂಡಜ್ಜಿ ಬಸಪ್ಪ ಅವರ ಒಂದು ಸವಿನೆನಪು



**ಶ್ರೀಮತಿ ಪಿ. ಸರೋಜ**
ಸಂಚಾಲಕರು
ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಸಮಿತಿ

**ಈ** ವರ್ಷ ನನ್ನ ವೃತ್ತಿ ಜೀವನದಲ್ಲಿ ಅವಿಸ್ಮರಣೀಯ ವರ್ಷ. ಏಕೆಂದರೆ, ದಿವಂಗತ ಕೊಂಡಜ್ಜಿ ಬಸಪ್ಪ ಅವರ ಜನ್ಮಶತಮಾನೋತ್ಸವ ಆಚರಿಸುತ್ತಿರುವ ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪದಾಧಿಕಾರಿಗಳಲ್ಲಿ ನಾನು ಕೂಡ ಭಾಗಿಯಾಗಿರುವುದು ನನಗೆ ಸಂತೋಷ ತರುವ ಮತ್ತೊಂದು ಸಂಗತಿ ಎಂದರೆ, ಈಗ ನಮ್ಮೊಂದಿಗೆ ಇಲ್ಲದ, ಆದರೆ ತಮ್ಮ ಸಾರ್ವಜನಿಕ ಜೀವನದಲ್ಲಿ ಅನೇಕ ಮೈಲುಗಲ್ಲುಗಳನ್ನು ಬಿಟ್ಟು ಹೋಗಿರುವ ಕೊಂಡಜ್ಜಿ ಬಸಪ್ಪ ಅವರೊಂದಿಗೆ ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸಿದ್ದೇನೆ ಎಂಬುದು ನನಗೆ ಹೆಮ್ಮೆಯ ಸಂಗತಿ. ಮತ್ತೊಂದು ಗೌರವದ ವಿಷಯ ಎಂದರೆ ನನ್ನನ್ನು ಜಿಲ್ಲಾ ಸಂಘಟನಾ ಆಯುಕ್ತೆ (ಗೈಡ್ಸ್) ಆಗಿ 1972ರಲ್ಲಿ ನೇಮಕ ಮಾಡಿದ್ದು ರಾಜ್ಯ ಮುಖ್ಯ ಆಯುಕ್ತರಾಗಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರು.

ಕೆಲವರು ಮನುಷ್ಯನಾಗಿ ಹುಟ್ಟಿದ್ದಕ್ಕೆ ಯಾವುದೋ ಒಂದು ವೃತ್ತಿಯನ್ನು ಆಯ್ಕೆಮಾಡಿಕೊಂಡು ಸಾಮಾನ್ಯ ವ್ಯಕ್ತಿಯಂತೆ ಬದುಕುತ್ತಾರೆ. ಆದರೆ, ಕೊಂಡಜ್ಜಿ ಬಸಪ್ಪ ಅವರ ವ್ಯಕ್ತಿತ್ವ ಸರ್ವೇಸಾಮಾನ್ಯವಾದದ್ದಲ್ಲ, ಅವರದ್ದು ಅಪೂರ್ವವಾದ ವ್ಯಕ್ತಿತ್ವ. ಹಾಗೆಯೇ ಕೊಂಡಜ್ಜಿ ಬಸಪ್ಪ ಅವರದ್ದು ಸಂತನ ಗುಣ. ಅವರು ಕೇಂದ್ರ ಹಾಗೂ ರಾಜ್ಯ ಸರ್ಕಾರದಲ್ಲಿ ಸಚಿವರಾಗಿದ್ದಾಗಲೂ ತಮ್ಮ ಅಧಿಕಾರವನ್ನು ಸಾರ್ವಜನಿಕ ಒಳಿತಾಗಾಗಿಯೇ ಬಳಸುತ್ತಿದ್ದರು. ಅವರ ರಾಜಕೀಯ ಅಧಿಕಾರದ ದಿನಗಳಲ್ಲಿಯೂ ಸ್ವಂತಕ್ಕಾಗಿ ಒಂದು ಕಾರನ್ನು ಇಟ್ಟುಕೊಂಡಿರಲಿಲ್ಲ ಎಂಬುದು ಸತ್ಯ.

ಅಂತರಾಷ್ಟ್ರೀಯ ಸೇವಾಸಂಸ್ಥೆಯಾದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಭಾರತಕ್ಕೆ ಕಾಲಿಟ್ಟದ್ದು ಕಳೆದ ಶತಮಾನದ ಆರಂಭದ ವರ್ಷಗಳಲ್ಲಿ. ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ಪಠ್ಯೇತರ ಕಲಿಕಾವಿಷಯವಾಗಿ ಆರಂಭವಾದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಮಕ್ಕಳಲ್ಲಿ ಭಾವೈಕ್ಯತೆ, ರಾಷ್ಟ್ರೀಯತೆ ಮತ್ತು ಇತರೆ ಜ್ಞಾನ ಪ್ರಕಾರಗಳನ್ನು ಪರಸ್ಪರ ಹಂಚಿಕೊಳ್ಳಲು ಸಮಾನ ವೇದಿಕೆ ಸೃಷ್ಟಿಸುತ್ತದೆ. ಶಾಲಾ ಕಾಲೇಜುಗಳಲ್ಲಿ ನಿಗದಿತ ಪಠ್ಯಗಳ ಕಲಿಕೆ ಒಂದು ಆಂತರಿಕ ಶಿಸ್ತಿಗೆ ಒಳಪಟ್ಟಿರುತ್ತದೆ. ಆದರೆ, ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಸಕ್ರಿಯರಾಗುವ ಶಾಲಾ ಕಾಲೇಜು ವಿದ್ಯಾರ್ಥಿಗಳು ಅನೇಕ ಕೌಶಲ್ಯಗಳನ್ನು ಕಲಿಯುತ್ತಾರೆ. ಪ್ರವಾಹ ಬಂದಾಗ ಆ ಪ್ರವಾಹ ಭೀತಿಯಿಂದ ಪಾರಾಗುವ ಕ್ರಮಗಳನ್ನು ಕಲಿಯುತ್ತಾರೆ. ಆಕಸ್ಮಿಕವಾಗಿ ಮನೆಗೆ ಬೆಂಕಿ ಬಿದ್ದಾಗ ಅದನ್ನು ನಂದಿಸುವ ಮತ್ತು ಬೆಂಕಿ ಅಘಾತಕ್ಕೆ ಗುರಿಯಾದವರನ್ನು ಪ್ರಥಮ ಚಿಕಿತ್ಸೆ ನೀಡುವ ವಿಧಿವಿಧಾನಗಳನ್ನು ಕಲಿಯುತ್ತಾರೆ. ವಿದ್ಯಾರ್ಥಿಗಳು ಪರಸ್ಪರ ಒಂದೆಡೆ ಕಲೆತು ತಮಗೆ ತಿಳಿದಿರುವ ಕೌಶಲ್ಯಗಳನ್ನು ಹಂಚಿಕೊಳ್ಳುತ್ತಾರೆ. ಇದರಿಂದಾಗಿ ಆ ವಿದ್ಯಾರ್ಥಿಗಳಲ್ಲಿ ಪರಸ್ಪರ ಪ್ರೀತಿ ಸೌಹಾರ್ದ ಬೆಳೆಯುತ್ತದೆ.

ನಮ್ಮ ರಾಜ್ಯದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಆಶಾದಾಯಕವಾಗಿದೆ. ಈ ಚಳವಳಿಯನ್ನು ರಾಜ್ಯದಾದ್ಯಂತ ವಿಸ್ತರಿಸುವಲ್ಲಿ ದಿ॥ ಕೊಂಡಜ್ಜಿ ಬಸಪ್ಪ ಅವರ ಕೊಡುಗೆ ಅತ್ಯಂತ ಅಮೂಲ್ಯವಾದದ್ದು. ಅವರ ದೂರದೃಷ್ಟಿಯಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಸಮೀಪದ ನೂರು ಎಕರೆ ಪ್ರದೇಶದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಸುಸಜ್ಜಿತವಾದ ತರಬೇತಿ ಕೇಂದ್ರವನ್ನು ಎಲ್ಲಾ ರೀತಿಯಿಂದ ಅಭಿವೃದ್ಧಿಪಡಿಸಿರುತ್ತಾರೆ. ಇದೇ ರೀತಿ ದಾವಣಗೆರೆ ಜಿಲ್ಲೆಯ ಅವರ ಹುಟ್ಟೂರಾದ ಕೊಂಡಜ್ಜಿಯಲ್ಲಿ 80 ಎಕರೆ ವಿಸ್ತೀರ್ಣದಲ್ಲಿ ಸುಸಜ್ಜಿತ ಸ್ಕೌಟ್ಸ್–ಗೈಡ್ಸ್ ತರಬೇತಿ ಕೇಂದ್ರ ಸ್ಥಾಪಿಸಿ ಅದರ ಅಭಿವೃದ್ಧಿ ಬೆಳವಣಿಗೆಗೆ ಅವರು ಕಾರಣಕರ್ತರಾಗಿರುತ್ತಾರೆ.

ಇಂಥಹ ಎಲ್ಲಾ ಸದವಕಾಶಗಳು ನನ್ನ ಪಾಲಿಗೆ ಒದಗಿ ಬಂದದ್ದು ಕೊಂಡಜ್ಜಿ ಬಸಪ್ಪ ಅವರ ಆಶಿರ್ವಾದದಿಂದ ಎಂಬುದು ಮಹತ್ವದ ಸಂಗತಿ. ಕೊಂಡಜ್ಜಿ ಬಸಪ್ಪ ಜನ್ಮಶತಮನೋತ್ಸವ ಆಚರಣೆ ಸಮಿತಿಯ ಸಂಚಾಲಕಿಯಾಗಿ ಕಾರ್ಯನಿರ್ವಹಿಸಲು ಅವಕಾಶ ಮಾಡಿಕೊಟ್ಟ ಮಾಜಿ ಸಚಿವರು ಹಾಗೂ ರಾಜ್ಯ ಮುಖ್ಯ ಆಯುಕ್ತರಾದ ಸನ್ಮಾನ್ಯ ಶ್ರೀ.ಪಿ.ಜಿ.ಆರ್.ಸಿಂಧ್ಯ ಅವರಿಗೆ ರಾಜ್ಯ ಸಂಸ್ಥೆಯ ಪದಾಧಿಕಾರಿಗಳಿಗೆ, ಜನ್ಮಶತಮಾನೋತ್ಸವ ಸಮಿತಿಯ ಅಧ್ಯಕ್ಷರಾಗಿ ಮಾರ್ಗದರ್ಶನ ಮಾಡಿದ ಸನ್ಮಾನ್ಯ ಡಾ.ಗೊ.ರು.ಚನ್ನಬಸಪ್ಪ ಅವರಿಗೆ, ರಾಜ್ಯಸಂಸ್ಥೆ ಮತ್ತು ಜಿಲ್ಲಾಸಂಸ್ಥೆಗಳ ಪದಾಧಿಕಾರಿಗಳಿಗೆ ಸಂಸ್ಥೆಯ ನೌಕರವರ್ಗದವರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

## THE PRICE OF 'SIDDHI'

**Once a great Yogi came to see Ramakrishna Paramhamsa. After a strenuous effort and practice of sixteen years, this Yogi had attained the prowess of walking on the water. To impress Paramhamsa, he came walking on the river Ganges on whose banks Ramakrishna lived in Dakshineshwar. He asked Ramakrishna about his prowess and told him that it took him sixteen years to attain this 'Siddhi'. "It is worth only two paise" replied the Savant. "You have wasted sixteen years of your life for nothing. Any boatman could have brought you here for two paise", Paramhamsa added and was lost in reverie.**

---

## RADHAKRISHNA HIMSELF

**During the question hour in Rajya Sabha, the first question was asked by Sita Parmanand. The second question was in the name of Savitridevi and the third was asked by Parvatidevi. Dr. Radhakrishnan was the Vice-President at that time and as such presided over the meetings of Rajya Sabha. He jocularly remarked, "Oh, today we have Sita, Savitri and Parvati with us".**

**Mahavir Tyagi, who was known for his sharp wit, stood in his seat and said, "Not only Sita, Savitri and Parvati, Radhakrishna himself is present with us". His thrust was towards the Chairman, Dr.Radhakrishnan. The whole house resounded with laughter as Mahavir Tyagi took his seat.**

# ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಉದ್ಘಾಟನಾ ಸಮಾರಭ 11 ಡಿಸೆಂಬರ್ 2014

ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಭದ್ರ ಬುನಾದಿ ಹಾಕಿದ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಆಚರಣೆಗೆ ದಿನಾಂಕ 11-12-2014 ರಂದು ಚಾಲನೆ ನೀಡಲಾಯಿತು.

ಬೆಂಗಳೂರಿನ ಅರಮನೆ ರಸ್ತೆಯ ಶಾಂತಿಗೃಹದ ಆವರಣದ ಸಭಾಭವನದಲ್ಲಿ ನಡೆದ ಸಮಾರಂಭದಲ್ಲಿ ಕನ್ನಡ ಸಾಹಿತ್ಯ ಪರಿಷತ್‌ನ ಮಾಜಿ ಅಧ್ಯಕ್ಷರಾದ ಡಾ. ಸಾ.ಶಿ ಮರುಳಯ್ಯನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡುತ್ತಾ ಮೌಲ್ಯಗಳು ಎಲ್ಲರಿಗೂ ಪ್ರೇರಣೆ, ಸಮಾಜ ಸೇವಾ ಮನೋಭಾವ ಬೆಳಸಿಕೊಂಡ ಬಸಪ್ಪನವರು "ಮಾತಿಗಿಂತ ಕೃತಿಗೆ ಹೆಚ್ಚಿಗೆ ಆದ್ಯತೆ ನೀಡಿದ್ದರು" ಎಂದರು.

ಡಾ. ರಮೇಶ್ ಕಾಮತ್ ಮಾತನಾಡಿ ಕೊಂಡಜ್ಜಿ ಬಸಪ್ಪನವರು ಉತ್ತಮ ಸಮಾಜಸೇವೆಯ ಮೂಲಕ ಕೋಟಾ ಶಿವರಾಮ ಕಾರಂತರ ನುಡಿಯನ್ನು ಸಾರ್ಥಕಗೊಳಿಸಿದ್ದಾರೆ ಎಂದು ನುಡಿದರು.

ಮಾಜಿ ಕೇಂದ್ರ ಸಚಿವ ಶ್ರೀ ಎಂ.ವಿ. ರಾಜಶೇಖರನ್‌ರವರು www.bsgkarnataka.org ಮತ್ತು www.kondajjibasappa.org ವೆಬ್‌ಸೈಟ್ ಬಿಡುಗಡೆ ಮಾಡಿದರು. ಅಧ್ಯಕ್ಷತೆ ವಹಿಸಿದ್ದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಮಾತನಾಡಿ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳನ್ನು ಕಡ್ಡಾಯಗೊಳಿಸಬೇಕೆಂದು ಸರ್ಕಾರಕ್ಕೆ ಮನವಿ ಮಾಡಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಸಂಸ್ಥೆಯ ಉಪಾಧ್ಯಕ್ಷರಾಗಿ ಆಯ್ಕೆಯಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರನ್ನು ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ಪ್ರಾರಂಭದಲ್ಲಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌಟ್ಸ್) ಸ್ವಾಗತಿಸಿದರು. ಶ್ರೀಮತಿ ಗೀತಾ ನಟರಾಜ್ ರಾಜ್ಯ ಆಯುಕ್ತರು (ಗೈಡ್ಸ್) ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್) ವಂದನಾರ್ಪಣೆ ಸಲ್ಲಿಸಿದರು.

ರಾಜ್ಯ ಸಂಸ್ಥೆ ಪದಾಧಿಕಾರಿಗಳು, ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ ಮತ್ತು ರಾಜ್ಯದ ಇತರ ಜಿಲ್ಲೆಗಳ ಜಿಲ್ಲಾ ಪದಾಧಿಕಾರಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಬೆಂಗಳೂರು ಉತ್ತರ ಮತ್ತು ಬೆಂಗಳೂರು ದಕ್ಷಿಣ ಜಿಲ್ಲೆಯ 500 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

**"True Scouts are the best friends of animals, for living in the wood and wilds, and practicing observation and tracking, they get to know more than other people about the ways and habits of birds and animals, and therefore they understand them and are more in sympathy with them".**

**- ROBERT BADEN POWELL**

# ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಸ್ಮರಣಾರ್ಥ ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ದಿನಾಂಕ 17 ಜನವರಿಯಿಂದ 23 ಜನವರಿ 2015ರವರೆಗೆ ಏರ್ಪಡಿಸಿದ್ದ 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಜಾಂಬೋರೇಟ್‌ನ ವರದಿ

**27**ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಜಾಂಬೋರೇಟ್ ದಿನಾಂಕ 17-01-2015 ರಿಂದ 23-01-2015 ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಡೆದ ವರದಿ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಏಳುದಿನ ನಡೆದ 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಜಾಂಬೋರೇಟ್ 2015ರ ಸಮಾವೇಶ ಅವಿಸ್ಮರಣೀಯವಾಗಿತ್ತು. ಈ ಜಾಂಬೋರೇಟ್‌ನಲ್ಲಿ ಸುಮಾರು 5000 ಸ್ಕೌಟ್ಸ್/ಗೈಡ್ಸ್/ರೋವರ್ಸ್/ರೇಂಜರ್ಸ್, ದಳನಾಯಕ/ದಳನಾಯಕಿಯರು, ಪೋಷಕರು, ತರಬೇತುದಾರರು, ಜಿಲ್ಲಾ ಮತ್ತು ರಾಜ್ಯ ಮಟ್ಟದ ಪದಾಧಿಕಾರಿಗಳು, ಚಳವಳಿಯ ಹಿತೈಷಿಗಳು ಭಾಗವಹಿಸಿದ್ದರು.

27ನೇ ಜಾಂಬೋರೇಟ್‌ನ್ನು ದಿವಂಗತ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಸ್ಮರಣಾರ್ಥ ಆಚರಿಸಲಾಗಿದೆ. ಕೊಂಡಜ್ಜಿ ಬಸಪ್ಪನವರು ಕೇಂದ್ರ ಸರ್ಕಾರದಲ್ಲಿ ಸಚಿವರಾಗಿದ್ದರು. ಸಕ್ರಿಯ ರಾಜಕಾರಣದಲ್ಲಿದ್ದುಕೊಂಡೇ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಅವರ ಕೊಡುಗೆ ಅಪಾರವಾದದ್ದು. ಹದಿನೆಂಟು ವರ್ಷ ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿದ ಅವಧಿಯಲ್ಲಿಯೇ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದಲ್ಲಿ 100 ಎಕರೆಗಳ ಡಾ॥ ಆನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರವನ್ನು ಅಭಿವೃದ್ಧಿಗೊಳಿಸಿದರು ಹಾಗೂ ದಾವಣಗೆರೆ ಸಮೀಪ ಕೊಂಡಜ್ಜಿಯಲ್ಲಿ 80 ಎಕರೆಗಳ ವಿಸ್ತೀರ್ಣದಲ್ಲಿ ಸ್ಕೌಟ್ಸ್ ಹಾಗೂ ಗೈಡ್ಸ್‌ಗಾಗಿ ತರಬೇತಿ ಮತ್ತು ಶಿಬಿರ ಕೇಂದ್ರವನ್ನು ಸರ್ಕಾರದಿಂದ ಮಂಜೂರು ಮಾಡಿಸಿ ಅಭಿವೃದ್ಧಿಗೊಳಿಸಿದರು. ದಿವಂಗತ ಕೊಂಡಜ್ಜಿ ಬಸಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ನೀಡಿರುವ ಈ ಕೊಡುಗೆಗಳನ್ನು ನೆನೆಯುತ್ತಾ ಜಾಂಬೋರೇಟನ್ನು ಅವರ ಗೌರವಾರ್ಥವಾಗಿ ಅವರಿಗೆ ಸಮರ್ಪಿಸಲಾಗಿದೆ.

ಈ ಜಾಂಬೋರೇಟ್‌ನ ಘೋಷ ವಾಕ್ಯ "ನೆಲ ಜಲ ರಕ್ಷಣೆ ನಮ್ಮ ಹೊಣೆ" ಎಂಬುದಾಗಿತ್ತು. ನೀರು, ಭೂಮಿಯ ರಕ್ಷಣೆಯನ್ನು ಮಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ ಎಂಬುದೇ ಈ ಘೋಷ ವಾಕ್ಯದ ಅರ್ಥವಾಗಿದೆ. ಜಾಂಬೋರೇಟ್‌ಗಾಗಿಯೇ ವಿಶೇಷ ಗೀತೆಯನ್ನು ಜಾನಪದ ತಜ್ಞ ಶ್ರೀ ಗೊ.ರು. ಚನ್ನಬಸಪ್ಪ ಅವರು ರಚಿಸಿದ್ದರು. ಈ ಗೀತೆಗೆ ಸಂಗೀತ ವಿದೂಷಿ ಶ್ರೀಮತಿ ಕಸ್ತೂರಿ ಶ್ರೀಧರ್, ರಾಗ ಸಂಯೋಜನೆ ಮಾಡಿದರು. ಬೆಂಗಳೂರಿನ ಯಲಹಂಕದ ಎಂ.ಇ.ಎಸ್. ಶಾಲೆಯ ವಿದ್ಯಾರ್ಥಿಗಳು ಈ ಹಾಡಿಗೆ ಧ್ವನಿ ನೀಡಿ ಸುಶ್ರಾವ್ಯವಾಗಿ ಹಾಡಿದರು. ಜಾಂಬೋರೇಟ್‌ನಲ್ಲಿ ಭಾಗವಹಿಸಿದ್ದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಈ ಹಾಡಿಗೆ ಧ್ವನಿ ನೀಡಿ ಜನಪ್ರಿಯಗೊಳಿಸಿದರು.

ಈ ಜಾಂಬೋರೇಟ್‌ಗೆ ರಾಜ್ಯದ 33 ಜಿಲ್ಲೆಗಳಿಂದ ಆಗಮಿಸಿದ್ದ ಐದು ಸಾವಿರಕ್ಕೂ ಹೆಚ್ಚು ಸ್ಕೌಟ್-ಗೈಡ್ ಹಾಗು ದಳನಾಯಕರುಗಳ ವಾಸ್ತವ್ಯಕ್ಕಾಗಿ ಎಲ್ಲಾ ರೀತಿಯ ಮೂಲ ಸೌಕರ್ಯಗಳನ್ನು ಸೃಷ್ಟಿಸಲಾಗಿತ್ತು. 400 ಗುಡಾರಗಳು, ಏಳೂ ದಿನಗಳ ಕಾಲ ಯಾವುದೇ ವ್ಯತ್ಯಾಸವಿಲ್ಲದೇ ನೀರು ಮತ್ತು ವಿದ್ಯುತ್ ಸೌಕರ್ಯ, ಬಿಸಿನೀರಿನ ವ್ಯವಸ್ಥೆ, 24 ಗಂಟೆಗಳ ಕಾಲ ತುರ್ತು ವೈದ್ಯಕೀಯ ಚಿಕಿತ್ಸಾ ಘಟಕ ಮತ್ತು ಪೊಲೀಸ್

ಭದ್ರತೆಯನ್ನು ಒದಗಿಸಲಾಗಿತ್ತು ಹಾಗೂ ಆಹಾರ ಸಾಮಾಗ್ರಿಗಳು, ತರಕಾರಿ, ಹಣ್ಣು, ಹಾಲಿನ ಉತ್ಪನ್ನಗಳು, ಅಡಿಗೆ ಅನಿಲದ ಮಳಿಗೆಗಳನ್ನೂ ಯೋಜಿಸಲಾಗಿತ್ತು.

ಜನವರಿ 17ರ ಮುಂಜಾನೆಯಿಂದಲೇ ಸ್ಕೌಟ್ಸ್ ಹಾಗೂ ಗೈಡ್ಸ್‌ಗಳು, ತರಬೇತಿ ನಾಯಕರು ಮತ್ತು ದಳ ನಾಯಕ/ ನಾಯಕಿಯರು ದೊಡ್ಡಬಳ್ಳಾಪುರದ ಶಿಬಿರ ಕೇಂದ್ರದಲ್ಲಿ ತಮಗೆ ನಿಗದಿಯಾಗಿದ್ದ ಬಿಡಾರಗಳಲ್ಲಿ ವಾಸ್ತವ್ಯ ಹೂಡಿದ್ದರು. ಆ ರಾತ್ರಿ ನಡೆದ ಸುಂದರವಾದ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಸ್ಥಳೀಯ ಶಾಲೆಗಳ ಪ್ರತಿಭೆಗಳು ಎಲ್ಲರ ಮನಸ್ಸನ್ನು ಸೂರೆಗೊಂಡವು. ಶ್ರೀ ಕೆ.ಎಮ್. ಗುರುರಾಜ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಎನ್. ಹನುಮಂತಗೌಡ, ಜಿಲ್ಲಾ ಪಂಚಾಯಿತಿ ಸದಸ್ಯರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಬಿ.ಕೆ. ಶಿವಪ್ಪ, ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ಈ ಶಿಬಿರಾಗ್ನಿಯಲ್ಲಿ ಉಪಸ್ಥಿತರಿದ್ದರು.

## PUNISHMENT TO 'PAPU'

**Mahatma Gandhi was very fond of Indira Gandhi. She was once sitting with Gandhiji during her childhood. Gandhiji was talking to her and told her, "Anyone who commits a mistake should be punished".**

**At this, Indira asked her, "Bapu, if Papu (Indira Gandhi addressed her father Jawaharlalji as Papu) commits a mistake, will you also punish him?"**

**"Why not", replied Bapu, "After all Jawaharlal is like a child to me". Bapu always treated Jawaharlalji as his child and many times pointed out his mistakes.**

## FOUNDATION STONE

**Shri Lal Bahadur Shastri entered public life at Allahabad as a member of the 'Servants of India Society'. He took great interest in social work and serving the people. But, he was a dedicated volunteer and did not believe in self-publicity.**

**One day, another volunteer asked him, "Brother, why are you so much against publishing your name through newspapers?" Shastriji told him, "Friend, even today, I remember the words of Lala Lajpat Rai. When he initiated me into the work of the 'Society', he told me, 'Lal Bahadur', there are two types of stones used in building the magnificent Taj Mahal. One is the marble of which the pillars and canopies are made. The world sees and admires them. The other are foundation stones, which nobody can see or admire." Lal Bahadur paused here for a while and politely added, "My friend, I wish to be like those foundation stones".**

# ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಸ್ಮರಣಾರ್ಥ ರಾಜ್ಯ ಮಟ್ಟದ ಆಜೀವ ಸದಸ್ಯರುಗಳ ಸಮಾವೇಶ

ದಿನಾಂಕ 03-10-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಹಾಗೂ ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ರಾಜ್ಯಮಟ್ಟದ ಆಜೀವ ಸದಸ್ಯರುಗಳ ಸಮಾವೇಶವನ್ನು ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಸಮಾವೇಶದ ಉದ್ಘಾಟನೆಯನ್ನು ಶ್ರೀ ಶ್ರೀ ಯತಿರಾಜ್ ಜೀಯರ್ ಸ್ವಾಮಿಗಳು, ಶ್ರೀ ಯತಿರಾಜಮಠ, ಮೇಲುಕೋಟೆ ಇವರು ಜ್ಯೋತಿ ಬೆಳಗಿಸುವುದರ ಮೂಲಕ ನೆರವೇರಿಸಿ ಮಾತನಾಡುತ್ತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಅಂತರರಾಷ್ಟ್ರೀಯ ಸಂಸ್ಥೆಯಾಗಿ ಬೆಳೆಯುತ್ತಿದ್ದು, ಯುವಕ-ಯುವತಿಯರಲ್ಲಿ ದೈವಭಕ್ತಿ, ಸೇವಾಭಾವನೆ, ರಾಷ್ಟ್ರಪ್ರೇಮ ಹಾಗೂ ಮೌಲ್ಯಾಧಾರಿತ ಶಿಕ್ಷಣವನ್ನು ನೀಡುತ್ತಿದೆ. ಮಕ್ಕಳಲ್ಲಿ ಉತ್ತಮ ನೈತಿಕ ಮೌಲ್ಯಗಳನ್ನು ಬೆಳೆಸಲು ಶ್ರಮಿಸುತ್ತಿದೆ ಮತ್ತು ಇಂತಹ ಸಂಸ್ಥೆಯಲ್ಲಿ ಶ್ರೀ ಸಿದ್ಧಯ್ಯ, ಭಾ.ಆ.ಸೇ(ನಿ) ಹಾಗೂ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಸೇವೆ ಸಲ್ಲಿಸುತ್ತಿರುವುದು ಸಂಸ್ಥೆಯ ಬೆಳವಣಿಗೆಗೆ ಸಹಕಾರಿಯಾಗಿದೆ ಎಂದು ತಿಳಿಸಿದರು.

ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿದ್ದಯ್ಯರವರು ಮುಖ್ಯ ಅತಿಥಿಯಾಗಿ ಸಮಾರಂಭದಲ್ಲಿ ಉಪಸ್ಥಿತರಿದ್ದು ಮಾತನಾಡಿ ಬದಲಾದ ಕಾಲಕ್ಕೆ ತಕ್ಕಂತೆ ನಮ್ಮ ಸಂಸ್ಥೆಯ ಕಾರ್ಯಚಟುವಟಿಕೆಗಳ ಶೈಲಿಯಲ್ಲೂ ಬದಲಾಗಬೇಕಾಗಿದೆ ಎಂದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮತ್ತು ರಾಷ್ಟ್ರೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಸದಸ್ಯರಾದ ಶ್ರೀ ಮೋಹನ್ ಕೊಂಡಜ್ಜಿ ಸಮಾರಂಭದಲ್ಲಿ ಉಪಸ್ಥಿತರಿದ್ದರು. ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದ್ದ ಕೊಂಡಜ್ಜಿ ಬಸಪ್ಪ ಜನ್ಮ ಶತಮಾನೋತ್ಸವ ಸಮಿತಿಯ ಅಧ್ಯಕ್ಷರಾದ ಹಾಗೂ ಸಹಾಯಕ ರಾಜ್ಯ ಆಯುಕ್ತರು ಸ್ಕೌಟ್ (ಪ್ರಕಟಣೆ) ಆದ ಡಾ. ಗೊ.ರು. ಚನ್ನಬಸಪ್ಪರವರು "ಸ್ವಯಂಸೇವೆ" ಎಂಬ ವಿಷಯವಾಗಿ ಉಪನ್ಯಾಸ ನೀಡಿದರು.

ಸಮಾರೋಪ ಸಮಾರಂಭದಲ್ಲಿ ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಆಜೀವ ಸದಸ್ಯರೊಂದಿಗೆ ಮುಕ್ತವಾಗಿ ಸಂವಾದ ನಡೆಸಿ ಮಾತನಾಡುತ್ತಾ ಮೂರುವರೆ ಲಕ್ಷದಷ್ಟಿರುವ ಸ್ಕೌಟ್ಸ್-ಗೈಡ್ಸ್ ಸಂಖ್ಯೆಯನ್ನು ಮುಂದಿನ 2 ವರ್ಷದಲ್ಲಿ 10 ಲಕ್ಷಕ್ಕೆ ಏರಿಸಲು ಗುರಿಯನ್ನು ಹೊಂದಲಾಗಿದ್ದು ಸಾಮಾಜಿಕ ಜಾಲತಾಣಗಳನ್ನು ಬಳಸಿ ಸ್ಕೌಟ್ಸ್-ಗೈಡ್ಸ್‌ನ ಬಗ್ಗೆ ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸಿ ತರಬೇತಿಯ ಗುಣಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸಲಾಗುವುದು ಎಂದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌಟ್) ಹಾಗೂ ಅಂತರರಾಷ್ಟ್ರೀಯ ಆಯುಕ್ತರು (ಸ್ಕೌಟ್) ಉಪಸ್ಥಿತರಿದ್ದು, ಆಜೀವ ಸದಸ್ಯರು ಸ್ವಪ್ರೇರಣೆಯಿಂದ ಮುಂದೆ ಬಂದು ಸಂಸ್ಥೆಯಲ್ಲಿ ಸೇವೆ ಸಲ್ಲಿಸಬೇಕೆಂದರು. ಇನ್ನೋರ್ವ ಅತಿಥಿಯಾಗಿ ಮಾತನಾಡಿದ ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್) ಮಾತನಾಡಿ ಒಂದು ಬಾರಿ ಸ್ಕೌಟ್-ಗೈಡ್ ಆದವರು ಜೀವನದ ಉದ್ದಕ್ಕೂ ಸ್ಕೌಟ್-ಗೈಡ್ ಎಂಬುದನ್ನು ನೆನಪಿಡಬೇಕು ಹಾಗೂ ಸ್ಕೌಟ್ಸ್-ಗೈಡ್ಸ್‌ನ ಉದಾತ್ತವಾದ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದು ತಿಳಿಸಿದರು.

ಸಮಾರಂಭದಲ್ಲಿ ಶ್ರೀಮತಿ ಪಿ. ಸರೋಜ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಪ್ರೇಂ ಕುಮಾರ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ವನಿತಾ ನಾರಾಯಣ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀ ಬಿ.ಕೆ. ಶೇಷಾದ್ರಿ, ಜಿಲ್ಲಾ ಕಾರ್ಯದರ್ಶಿ, ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಸಿ.ಎಸ್. ರೆಡ್ಡಿ ಮತ್ತು ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಹಾಗು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಸಮಾವೇಶದಲ್ಲಿ 60 ಕ್ಕೂ ಹೆಚ್ಚು ಆಜೀವ ಸದಸ್ಯರುಗಳು ಭಾಗವಹಿಸಿದ್ದರು.

## ರಾಜ್ಯಮಟ್ಟದ ರೋವರ್ಸ್-ರೇಂಜರ್ಸ್‌ಗಳ ಸಮುದಾಯ ಸೇವಾ ಶಿಬಿರ

ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವದ ಪ್ರಯುಕ್ತ ರಾಜ್ಯಮಟ್ಟದ ರೋವರ್ಸ್-ರೇಂಜರ್ಸ್ ಸಮುದಾಯ ಸೇವಾ ಶಿಬಿರವನ್ನು ಶ್ರೀ ಬೋಳಮಂಡಿ ತಿಪ್ಪಮ್ಮಸ್ವಾಮಿ

ದೇವಸ್ಥಾನ, ಬೋಳಮಾನದೊಡ್ಡಿ ತಾ॥ಜಿ॥ ರಾಯಚೂರು ಇಲ್ಲಿ ದಿನಾಂಕ 19 ರಿಂದ 23 ಸೆಪ್ಟಂಬರ್ 2015 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಮತ್ತು ರಾಯಚೂರು ಜಿಲ್ಲಾ ಸಂಸ್ಥೆ ಇವರ ಜಂಟಿ ಆಶ್ರಯದಲ್ಲಿ ಸಂಘಟಿಸಲಾಯಿತು.

ಶಿಬಿರದ ಉದ್ಘಾಟನಾ ಸಮಾರಂಭವು ದಿನಾಂಕ 19.09.2015 ರಂದು ಶ್ರೀ ಅಮರೇಗೌಡ ಪಾಟೀಲ್, ಜಿಲ್ಲಾ ಆಯುಕ್ತರು(ಸ್ಕೌ) ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ನಾಗರೆಡ್ಡಿ, ಉಪಾಧ್ಯಕ್ಷರು, ಶ್ರೀ ಬೋಳಮಂಡಿ ತಿಮ್ಮಪ್ಪಸ್ವಾಮಿ ದೇವಸ್ಥಾನ ಇವರು ದೀಪ ಬೆಳಗಿಸಿ ಶಿಬಿರವನ್ನು ಉದ್ಘಾಟಿಸಿದರು. ಶ್ರೀಎ.ಎಮ್. ಶಂಕರ್, ಎಲ್.ಟಿ.(ಆರ್.) ರೋವರ್ ವಿಭಾಗದ ನಾಯಕರು ಶಿಬಿರದ ಮುನ್ನೋಟ ನೀಡಿದರು. ಡಾ॥ ಶಿಲಾಕುಮಾರಿ ದಾಸ್‌ರವರು "ಯುವಕರು ಮತ್ತು ಸಮುದಾಯ ಸ್ವಚ್ಛತೆ" ಬಗ್ಗೆ ಮಾತನಾಡಿದರು. ಶ್ರೀ ಪ್ರಭಾಕರ್ ಭಟ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌ) ಮಂಗಳೂರು ಇವರು ಸ್ಕೌಟಿಂಗ್–ಗೈಡಿಂಗ್‌ನ ಉದ್ದೇಶ, ತತ್ವಗಳು ಪದ್ಧತಿ ಬಗ್ಗೆ ತಿಳಿಸಿದರು. ರೇಂಜರ್ ವಿಭಾಗದ ನಾಯಕಿ ಶ್ರೀಮತಿ ಮಲ್ಲೇಶ್ವರಿ, ರೇಂಜರಿಂಗ್ ಬಗ್ಗೆ ಮಾಹಿತಿ ನೀಡಿದರು. ಶ್ರೀ ವೆಂಕಟೇಶ ಪಾಟೀಲ್ ಉಪಾಧ್ಯಕ್ಷರು ಸ್ಥಳೀಯ ಸಂಸ್ಥೆ, ರಾಯಚೂರು ಇವರು ಮಾತನಾಡಿ ಇಂತಹ ಶಿಬಿರಗಳು ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿದೆ ಎಂದು ತಿಳಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್. ಹನುಮಂತಪ್ಪ, ಜಿಲ್ಲಾ ಖಜಾಂಚಿ ಶ್ರೀಮತಿ ಕೆ. ಆಲಿಯಾಖಾನಂ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌ) ಶ್ರೀ ಆರ್. ಹೆಚ್. ಸಾಗರ್ ಸಮಾರಂಭದಲ್ಲಿ ಉಪಸ್ಥಿತರಿದ್ದರು. ಶ್ರೀಮತಿ ಕಮಲಾ ಸಂಪತ್ ಕುಮಾರಿ ಜಿಲ್ಲಾ ಸಹಾಯಕ ಆಯುಕ್ತರು(ಗೈ) ಇವರು ಸ್ವಾಗತಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ದೇವಿಂದ್ರ ಕಟ್ಟೀಮನಿ ವಂದಿಸಿದರು. ಜಿಲ್ಲಾ ಸಂಘಟನಾ ಆಯುಕ್ತ(ಸ್ಕೌ) ಶ್ರೀ ರಾವುತರಾವ್ ಬರೂರ ಇವರು ಕಾರ್ಯಕ್ರಮ ನಿರ್ವಹಿಸಿದರು. ಇದೇ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರ 67ನೇ ಹುಟ್ಟು ಹಬ್ಬವನ್ನು ಎಲ್ಲ ಶಿಬಿರಾರ್ಥಿಗಳಿಗೆ ಸಿಹಿ ನೀಡಿ ಆಚರಿಲಾಯಿತು.

## ELOQUENT SPEAKER

**Subhas was a very forceful and eloquent speaker. He had a magnetic personality. When he reached South East Asia to assume the command of liberation movement, he united all Indians by his fiery speeches. He established Azad Hind Fouz and made plans to liberate India by armed struggle. People parted with everything, their property, jewellery and even their lives at his call. He warned the officers and men of Azad Hind Fauz, "For the present, I can offer you nothing except hunger, thirst, suffering and forced marches and death. But, if you follow me in life as well as in death..... I will lead you on to the road to victory and freedom". History is witness that thousands followed his exemplary example and died with 'Jai Hind' on their lips. Subhas gave his life to achieve his ambition of freeing India. He always said, "Give me your blood and I shall give you freedom!"**

**- SUBHASCHANDRA BOSE**

# ಜಿಲ್ಲಾ ವರದಿಗಳು

## ದಕ್ಷಿಣ ಕನ್ನಡ

ದಿನಾಂಕ 07-11-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಹಾಗೂ ಮಂಗಳೂರು ನಗರ ಸ್ಥಳೀಯ ಸಂಸ್ಥೆಗಳು ಜಂಟಿಯಾಗಿ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಆಚರಣೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪನಾ ದಿನಾಚರಣೆ ಹಾಗೂ ಧ್ವಜ ದಿನಾಚರಣೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಕಚೇರಿಯಲ್ಲಿ ಸಂಘಟಿಸಲಾಯಿತು.

ಶ್ರೀ ಯತೀಶ್ ಬೈಕಂಪಾಡಿ, ಅಧ್ಯಕ್ಷರು, ರೋಟರಿ ಮಂಗಳೂರು ಇವರು ಮುಖ್ಯ ಅತಿಥಿಯಾಗಿ ಧ್ವಜ ಸ್ಟಿಕ್ಕರ್‌ಗಳನ್ನು ಬಿಡುಗಡೆಗೊಳಿಸಿದರು. ಶ್ರೀಮತಿ ಐರಿನ್ ಡಿ. ಕುನ್ಹ, ಜಿಲ್ಲಾ ಆಯುಕ್ತರು (ಗೈಡ್ಸ್) ಮುಖ್ಯ ಅತಿಥಿಯಾಗಿ ಮಾತನಾಡಿದರು. ಶ್ರೀ ಎನ್.ಜಿ. ಮೋಹನ್, ಜಿಲ್ಲಾ ಮುಖ್ಯ ಆಯುಕ್ತರು, ಅಧ್ಯಕ್ಷತೆ ವಹಿಸಿದ್ದರು. ಶ್ರೀ ವಾಸುದೇವ ಬೋಳೂರು, ಜಿಲ್ಲಾ ಖಜಾಂಚಿ, ಶ್ರೀ ಕೃಷ್ಣಪ್ಪ ಸಮಾಜ ಸೇವಕರು ಇವರುಗಳು ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಎಂ.ಜಿ. ಕಜೆ, ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌಟ್ಸ್) ಸ್ವಾಗತಿಸಿದರು. ಶ್ರಿಮತಿ ಚಂದ್ರಕಲಾ, ಜಿಲ್ಲಾ ಸಂಘಟಕರು (ಗೈಡ್ಸ್) ವಂದಿಸಿದರು. ಶ್ರೀ ಎಂ. ಪ್ರಭಾಕರ್ ಭಟ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರ್ವಹಿಸಿದರು. ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ವರ್ಷಾಚರಣೆ ಹಾಗು ಧ್ವಜ ದಿನಾಚರಣೆ ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಂದ ಸೈಕಲ್ ಜಾಥಾ ಹಾಗು ನಗರ ಮೆರವಣಿಗೆ ಕಾರ್ಯಕ್ರಮ ಸಂಘಟಿಸಲಾಯಿತು. ಮಂಗಳೂರು ನಗರದ 200 ಸ್ಕೌಟ್ಸ್-ಗೈಡ್ಸ್‌ಗಳು, ಸ್ಕೌಟ್ಸ್-ಗೈಡ್ಸ್ ಶಿಕ್ಷಕರು ಸಮಾರಂಭದಲ್ಲಿ ಭಾಗವಹಿಸಿದ್ದರು.

## ಬೆಳಗಾವಿ

ದಿನಾಂಕ 07-11-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪನಾ ದಿನಾಚರಣೆಯುನ್ನು ಆಚರಿಸಲಾಯಿತು. ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸೈಕಲ್ ಜಾಥಾವನ್ನು ಆಯೋಜಿಸಲಾಗಿತ್ತು. ಜಾಥಾಕ್ಕೆ ಟಿಳಕವಾಡಿ ನಗರ ಸೇವಕರಾದ ಶ್ರೀ ಪಂಡರಿ ಪರಬ್, ಸಿ.ಪಿ.ಐ., ಶ್ರೀ ಜಾಧವ್ ರವರು ಹಸಿರು ನಿಶಾನೆ ತೋರಿದರು. ಜಾಥಾದಲ್ಲಿ ಶ್ರೀ ಎಸ್.ವೈ. ಹುಡೇದ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಜಿ.ಬಿ. ಮನ್ನಿಕೇರಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಯು.ಬಿ. ಗಂಜೀಗಟ್ಟಿ, ಜಿಲ್ಲಾ ಆಯುಕ್ತರು (ಗೈಡ್ಸ್), ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ಜಿಲ್ಲಾ ಸಂಘಟಕರುಗಳು ಹಾಗೂ ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

ದಿವಂಗತ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವದ ಪ್ರಯುಕ್ತ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಹಾಗೂ ಜೈನ್ ಹೆರಿಟೇಜ್ ಶಾಲೆ ಬೆಳಗಾವಿ ಇವರುಗಳ ಸಂಯುಕ್ತಾಶ್ರಯದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಗೆ ಒಂದು ದಿನದ ಯೋಗ ಕಾರ್ಯಾಗಾರ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಾಗಾರದ ಮುಖ್ಯ ಅತಿಥಿಗಳು ಹಾಗೂ ಉದ್ಘಾಟಕರಾಗಿ - ಸನ್ಮಾನ್ಯ ಶ್ರೀ ಯು.ಟಿ. ಖಾದರ್, ಆರೋಗ್ಯ ಸಚಿವರು, ಕರ್ನಾಟಕ ಸರ್ಕಾರ ಇವರು ಆಗಮಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ. ಹುಡೇದ, ಸಂಸ್ಥೆಯ ನಿರ್ದೇಶಕರಾದ ಶ್ರೀಮತಿ ಶ್ರದ್ಧಾ ಕೆ. ಅತಿಥಿ ಸ್ಥಾನವನ್ನು ವಹಿಸಿದ್ದರು. ಶ್ರೀ ಆರ್.ಜಿ. ಧಾರವಾಡಕರ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಮುಖ್ಯ ಅತಿಥಿಗಳಾದ ಸನ್ಮಾನ್ಯ ಶ್ರೀ ಯು.ಟಿ. ಖಾದರ್ ತಮ್ಮ ವಿದ್ಯಾರ್ಥಿ ಜೀವನದ ಸ್ಕೌಟಿಂಗ್ ಶಿಕ್ಷಣದ ಅನುಭವವನ್ನು ಮಕ್ಕಳ ಜೊತೆ ಹಾಡಿನೊಂದಿಗೆ ಹಂಚಿಕೊಂಡರು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ತಮ್ಮ ತಂದೆತಾಯಿಗಳಿಗೆ ಕೀರ್ತಿ ತರುವಂತರಾಗಬೇಕು ಎಂದು ಹೇಳಿದರು.

ಶ್ರೀಮತಿ ಅಮ್ಮಿದೋಶಿ, ಆಡಳಿತಾಧಿಕಾರಿಗಳು, ಶ್ರೀ ಮಂಜಿತ್ ಜೈನ್, ಪ್ರಾಚಾರ್ಯರು, ಜೈನ್ ಹೆರಿಟೇಜ್ ಶಾಲೆ ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು, ಶ್ರೀ ಎಸ್.ಎಂ. ನದಾಫ, ಜಿಲ್ಲಾ ಕಾರ್ಯದರ್ಶಿ, ಶ್ರೀ ಡಿ.ಬಿ. ಅತ್ತಾರ, ಶ್ರೀ ವಿಠ್ಠಲ, ಎಸ್.ಬಿ. ಜಿಲ್ಲಾ ಸಂಘಟಕರು ಬೆಳಗಾವಿ ಶ್ರೀಮತಿ ಪಲ್ಲವಿ ನಾಡಕರ್ಣಿ, ಕುಮಾರಿ ಶಿವಲೀಲಾ ಇಟಗಿ, ಕುಮಾರಿ ಪೂನಂ ಹೂವೆಕರ ಮತ್ತು ವಿವಿಧ ಶಾಲೆಗಳಿಂದ 300ಕ್ಕು ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಧಾರವಾಡ

ಕೊಂಡಜ್ಜಿ ಬಸಪ್ಪ ಜನ್ಮ ಶತಮಾನೋತ್ಸವದ ಅಂಗವಾಗಿ ದಿನಾಂಕ 06-10-2015 ರಿಂದ 10-10-2015ರ ವರೆಗೆ ನಡೆದ ತೃತೀಯ ಸೋಪಾನ ಪದಕ ಸಿದ್ಧತಾ ಶಿಬಿರದಲ್ಲಿ 200 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.



**ದಿನಾಂಕ 07.11.2015ರಂದು ಧಾರವಾಡದಲ್ಲಿ ಸೈಕಲ್ ಜಾಥಾ ಹೊರಡಲು ಸಿದ್ಧವಾಗಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು**

## ಚಿಕ್ಕಮಗಳೂರು

ದಿನಾಂಕ 07-11-2015 ರಂದು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿಯವರ ಅಧ್ಯಕ್ಷತೆಯಲ್ಲಿ ಸ್ಕೌಟ್-ಗೈಡ್ ಸಪ್ತಾಹದ ಉದ್ಘಾಟನಾ ಸಮಾರಂಭ ನಡೆಯಿತು. ಪೂರ್ವಭಾವಿಯಾಗಿ ಜನಸಾಮಾನ್ಯರಲ್ಲಿ ಪರಿಸರ ಪ್ರಜ್ಞೆ ಮೂಡಿಸುವ ಬಗ್ಗೆ ಸೈಕಲ್ ಜಾಥಾವನ್ನು ನಗರದ ಪ್ರಮುಖ ಬೀದಿಗಳಲ್ಲಿ ನಡೆಸಲಾಯಿತು. ಅದೇ ದಿನ ಸಮಾರಂಭದಲ್ಲಿ ಸ್ಕೌಟಿಂಗ್ ಗೈಡಿಂಗ್ ಧ್ವಜ ಚೀಟಿಗಳನ್ನು ಉಪ್ಪಳ್ಳಿ ಕೆನರಾ ಬ್ಯಾಂಕ್ ಮ್ಯಾನೇಜರ್‌ರಾದ ಶ್ರೀ ಜಯಪ್ರಕಾಶ್ ರವರು ಬಿಡುಗಡೆ ಮಾಡಿದರು. ಶ್ರೀ ಕೊಂಡಜ್ಜಿ ಬಸಪ್ಪನವರ ಜನ್ಮಶತಾಬ್ಧಿ ಆಚರಣೆ ಪ್ರಯುಕ್ತ ಪ್ರಬಂಧ ಸ್ಪರ್ಧೆ, ಅಡುಗೆ ಮಾಡುವ ಸ್ಪರ್ಧೆ, ರಸಪ್ರಶ್ನೆ ಮುಂತಾದ ಕಾರ್ಯಕ್ರಮಗಳನ್ನು ನಡೆಸಲಾಯಿತು.

ಶ್ರೀ ಕೊಂಡಜ್ಜಿ ಬಸಪ್ಪನವರ ಜೀವನ ಒಂದು ಸಂದೇಶ, ದೀರ್ಘಕಾಲ ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಮುಖ್ಯ ಆಯುಕ್ತರಾಗಿ ರಾಜ್ಯದಲ್ಲಿ ಸ್ಕೌಟ್-ಗೈಡ್ ಚಳುವಳಿಯು ಉತ್ತುಂಗಕ್ಕೇರಲು ಕಾರಣೀಭೂತರಾದ ಶ್ರೀ ಕೊಂಡಜ್ಜಿ ಬಸಪ್ಪನವರ ಸೌಜನ್ಯ, ಸರಳತೆ ಮತ್ತು ಸ್ನೇಹಮಯಿ ವ್ಯಕ್ತಿತ್ವವೇ ಕಾರಣ" ಎಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀಎಂ.ಎನ್. ಷಡಕ್ಷರಿಯವರು ತಿಳಿಸಿದರು. ಶ್ರೀಮತಿ ಅನಿತಾ ನಾಗೇಂದ್ರ, ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್.ಪಿ. ಶಶಿಧರರಾವ್ ಬಹುಮಾನ ವಿತರಿಸಿದರು. ಈ ಸಮಾರಂಭದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ನಂದಕುಮಾರ್, ಶ್ರೀ ನೀಲಕಂಠಚಾರ್, ಶ್ರೀ ಬಿ.ಎನ್. ಕಿರಣ್ ಕುಮಾರ್, ಜಿಲ್ಲಾ ಸಂಘಟಕರು, ಮತ್ತಿತರರು ಉಪಸ್ಥಿತರಿದ್ದರು. ನಗರದ ವಿವಿಧ ಶಾಲೆಗಳಿಂದ ಸುಮಾರು 200 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಸಮಾರಂಭದಲ್ಲಿ ಭಾಗವಹಿಸಿದ್ದರು.

## ಹಾಸನ

ದಿನಾಂಕ 07-11-2015 ರಂದು ಭಾರತ್ ಸ್ಕೌಟ್ಸ್ – ಗೈಡ್ಸ್‌ನ ಜಿಲ್ಲಾ ಭವನದಲ್ಲಿ ಏರ್ಪಡಿಸಿದ್ದ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಹಾಗು ಸ್ಕೌಟ್ಸ್-ಗೈಡ್ಸ್ ನ ಸಂಸ್ಥಾಪನಾ ದಿನಾಚರಣೆಗೆ ಅಂಗವಾಗಿ ಏರ್ಪಡಿಸಿದ್ದ ಪಥಚಲನೆಗೆ ಜಿಲ್ಲೆಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ಗಣೇಶ್ ಭಟ್ ಹಸಿರು ನಿಶಾನೆ ತೋರಿಸಿ ಬಸಪ್ಪನವರ ಬದುಕು ನಮಗೆಲ್ಲರಿಗೂ ಆದರ್ಶವಾಗಿದ್ದು ಮಕ್ಕಳು ಚಿಕ್ಕ ವಯಸ್ಸಿನಿಂದಲೇ ಉದಾತ್ತ ಚಿಂತನೆ ತುಂಬಿಕೊಂಡು ಈ ದೇಶದ ಉತ್ತಮ ನಾಗರಿಕರಾಗಬೇಕು ಎಂದರು. ಪಥಸಂಚಲನವು ಕೊಂಡಜ್ಜಿ ಬಸಪ್ಪವರ ಭಾವಚಿತ್ರದೊಂದಿಗೆ ನಗರದೆಲ್ಲೆಡೆ ಯಶಸ್ವಿಯಾಗಿ ಸಾಗಿತು. ಇದೆ ವೇಳೆ ಬಸಪ್ಪನವರ ಕುರಿತು ಪ್ರಬಂಧ ಸ್ಪರ್ಧೆ, ಭಾವಚಿತ್ರ ಸ್ಪರ್ಧೆ, ಗಾಯನ ಸ್ಪರ್ಧೆ ಏರ್ಪಡಿಸಲಾಗಿತ್ತು.

ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಹೇಮಾವತಿ ಮಂಜುನಾಥ್ ಭಾಗವಹಿಸಿ ಮಾತನಾಡಿ ಮಕ್ಕಳಿಗೆ ನಿಸರ್ಗದ ಬಗ್ಗೆ ಒಲವು ಮೂಡಿಸಲು ಸ್ಕೌಟ್ಸ್-ಗೈಡ್ಸ್ ಚಳುವಳಿಯು ಸಹಕಾರಿಯಾಗುತ್ತಿರುವುದರಿಂದ ಸ್ಕೌಟ್-ಗೈಡ್‌ಗಳು ಪರಿಸರದ ಬಗ್ಗೆ ಆಸಕ್ತಿ ಮತ್ತು ಪ್ರೀತಿ ಬೆಳೆಸಿಕೊಂಡು ಪರಿಸರ ಸಂರಕ್ಷಣೆಗೆ ಮುಂದಾಗುತ್ತಿರುವುದು ಶ್ಲಾಘನೀಯ ಎಂದು ತಿಳಿಸಿದರು.

ನಗರದ ಭಾರತ್ ಸ್ಕೌಟ್ಸ್ – ಗೈಡ್ಸ್‌ನ ಜಿಲ್ಲಾ ಭವನದಲ್ಲಿ ಏರ್ಪಡಿಸಿದ್ದ ಕೊಂಡಜ್ಜಿ ಬಸಪ್ಪ ಅವರ ಜನ್ಮ ಶತಮಾನೋತ್ಸವ ಹಾಗೂ ಸ್ಕೌಟ್ಸ್-ಗೈಡ್ಸ್‌ನ ಸಂಸ್ಥಾಪನಾ ದಿನಾಚರಣೆಯಲ್ಲಿ ಸ್ಕೌಟ್ಸ್ – ಗೈಡ್ಸ್‌ನ ಸ್ಟಾಂಪ್ ಬಿಡುಗಡೆಗೊಳಿಸಿ ಮಾತನಾಡಿ, ಮಕ್ಕಳಲ್ಲಿ ಸೇವೆ ಮಾಡುವ ಮತ್ತು ಶಿಸ್ತು ಬೆಳೆಸುವಂತಹ ಶಿಕ್ಷಣ ಅತ್ಯಂತ ಅವಶ್ಯವಾಗಿದ್ದು, ಇದರಿಂದ ಮಕ್ಕಳ ಪ್ರಗತಿಗೆ ಸಹಕಾರಿಯಾಗುತ್ತದೆ ಎಂದರಲ್ಲದೆ ತಾವೂ ಕೂಡ ಸ್ಕೌಟ್-

ಗೈಡ್‌ನ ಜಿಲ್ಲಾ ಸಹಾಯಕ ಆಯುಕ್ತರಾಗಿ ಸೇವೆ ಸಲ್ಲಿಸಿದ ದಿನಗಳನ್ನು ಸ್ಮರಿಸಿದರು. ಮಕ್ಕಳು ಕೈಲಾದ ಮಟ್ಟಿಗೆ ದೇಶಕ್ಕೆ ಮತ್ತು ನೆರೆ-ಹೊರೆಯವರಿಗೆ ಸೇವೆ ಸಲ್ಲಿಸುವ ಗುಣಗಳನ್ನು ಬೆಳೆಸಿಕೊಳ್ಳುವಂತೆ ಸಲಹೆ ನೀಡಿದರು.



ದಿನಾಂಕ 07.11.2015ರಂದು ಸಂಸ್ಥಾಪನಾ ಹಾಗೂ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಆಚರಣೆ ಪ್ರಯುಕ್ತ ಹಾಸನದಲ್ಲಿ ಹಮ್ಮಿಕೊಂಡಿದ್ದ ಪಥಚಲನದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿರುವುದು.

ಸ್ಕೌಟ್ಸ್ ಆಯುಕ್ತ ಶ್ರೀ ಪ್ರಕಾಶ್ ಎಸ್. ಯಾಜಿ ಮಾತನಾಡಿ, ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಮಾನವೀಯ ಮೌಲ್ಯಗಳು ವೃದ್ಧಿಯಾಗ ಬೇಕಾಗಿದೆ. ಮಕ್ಕಳು ಈ ದೇಶದ ಸಂಪತ್ತಾಗಿರುವುದರಿಂದ ಅವರಲ್ಲಿ ನಿಜವಾದ ಮೌಲ್ಯಗಳನ್ನು ಬೆಳೆಸಬೇಕಾಗಿದೆ ಎಂದರು.

ಕಾರ್ಯಕ್ರಮದಲ್ಲಿ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪ ಅಧ್ಯಕ್ಷೀಯ ನುಡಿಗಳನ್ನಾಡಿದರು. ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಆಚರಣೆ ಮತ್ತು ಅದರ ಮಹತ್ವ ಕುರಿತು ಮಾತನಾಡುತ್ತಾ, ಅವರು ರಾಜ್ಯ ಮತ್ತು ಕೇಂದ್ರದಲ್ಲಿ ವಿವಿಧ ಖಾತೆಗಳನ್ನು ನಿರ್ವಹಿಸಿದರಲ್ಲದೇ, ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯ ಬೆಳವಣಿಗೆಗೆ ಅವಿರತ ಶ್ರಮಿಸಿದರು ಎಂದು ಹೇಳಿದರು. ಇದೇ ಸಂದರ್ಭದಲ್ಲಿ ಕೊಂಡಜ್ಜಿ ಬಸಪ್ಪನವರ ಕುರಿತು ಏರ್ಪಡಿಸಿದ್ದ ವಿವಿಧ ಸ್ಪರ್ಧೆಗಳಲ್ಲಿ ವಿಜೇತ ಮಕ್ಕಳಿಗೆ ಬಹುಮಾನ ವಿತರಿಸಲಾಯಿತು.

## ಶಿವಮೊಗ್ಗ

ದಿನಾಂಕ 31.08.2015 ರಂದು ದಿ॥ ಕೊಂಡಜ್ಜಿ ಬಸಪ್ಪ ನವರ ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ಶಿವಮಾಗ್ಗದ ಕುವೆಂಪು ರಂಗ ಮಂದಿರದಲ್ಲಿ ಹಮ್ಮಿಕೊಳ್ಳಲಾಯಿತು. ಶ್ರೀಮತಿ ವಿಜಯಲಕ್ಷ್ಮಿ, ಜಿಲ್ಲಾ ಆಯುಕ್ತರು ಇವರು ಸ್ಕೌಟ್ಸ್ ಗೈಡ್ಸ್‌ನ ಧ್ಯೇಯೋದ್ದೇಶವನ್ನು ಪ್ರತಿಬಿಂಬಿಸುವ ಕಿರುನಾಟಕದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ ವಹಿಸಿದ್ದರು. ಉದ್ಘಾಟಕರಾಗಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ.ಪಿ.ಜಿ.ಆರ್ ಸಿಂಧ್ಯ ರವರು ಭಾಗವಹಿಸಿದ್ದರು. ಮುಖ್ಯ ಆತಿಥಿಗಳಾಗಿ ಸನ್ಮಾನ್ಯ ಶ್ರೀ ಡಿ.ಹೆಚ್. ಶಂಕರ್ ಮೂರ್ತಿ ಮಾನ್ಯ ಸಭಾಪತಿಗಳು ಕರ್ನಾಟಕ ವಿಧಾನ ಪರಿಷತ್ ಹಾಗೂ ವಿಧಾನ ಪರಿಷತ್ ಸದಸ್ಯರಾದ ಸನ್ಮಾನ್ಯ ಶ್ರೀ ಭಾನು ಪ್ರಕಾಶ್ ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಎಸ್.ಆರ್. ವಿಜಯಲಕ್ಷ್ಮಿ ಎಲ್ಲರನ್ನು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ ಬಿಂದುಕುಮಾರ್ ರವರು ಶ್ರೀ ದಿ॥ ಕೊಂಡಜ್ಜಿ ಬಸಪ್ಪನವರ ಜೀವನ ಚರಿತ್ರೆಯನ್ನು ಪರಿಚಯಿಸಿದರು. ವೇದಿಕೆಯಲ್ಲಿದ್ದ ಎಲ್ಲಾ ಗಣ್ಯರು ಜ್ಯೋತಿ ಬೆಳಗಿಸಿ ಕೊಂಡಜ್ಜಿ ಬಸಪ್ಪನವರ ಭಾವಚಿತ್ರಕ್ಕೆ ಪುಷ್ಪಾರ್ಚನೆ ಮಾಡುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು ಶ್ರೀ.ಪಿ.ಜಿ.ಆರ್.ಸಿಂಧ್ಯ ರವರು ಮಾತನಾಡುತ್ತಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಕೊಂಡಜ್ಜಿ ಬಸಪ್ಪ ನವರ ಸೇವೆ ಅಪಾರವಾದದು ಅವರ ಇಡೀ ಕುಟುಂಬ ಸಂಸ್ಥೆಯ ಏಳಿಗೆಗಾಗಿ ದುಡಿಯುತ್ತಿದೆ. ಅವರ ಅನೇಕ ಕನಸುಗಳು ಹಾಗೇ ಉಳಿದಿರುವುದರಿಂದ ನಾವು, ಸಾರ್ವಜನಿಕರು ಸೇರಿ ಪೂರ್ಣ ಮಾಡಬೇಕಾಗಿದೆ ಎಂದು ನುಡಿದರು.

ಶ್ರೀ ಡಿ.ಹೆಚ್. ಶಂಕರಮೂರ್ತಿ ಯವರು ಮಾತನಾಡುತ್ತಾ ಕೊಂಡಜ್ಜಿ ಬಸಪ್ಪನವರ ಕನಸುನ್ನು ನನಸಾಗಿಸಲು ನನ್ನ ಕೈಲಾದ ಸಹಕಾರವನ್ನು ನೀಡುತ್ತೇನೆಂದು ಭರವಸೆ ನೀಡಿದರು, ಮತ್ತೋರ್ವ ಮುಖ್ಯ ಆತಿಥಿ ವಿಧಾನಪರಿಷತ್ ಸದಸ್ಯರಾದ ಶ್ರೀ ಎನ್.ಬಿ. ಭಾನುಪ್ರಕಾಶ್ ರವರು ಮಾತನಾಡುತ್ತಾ ವಿದ್ಯಾರ್ಥಿದೆಸೆಯಲ್ಲೇ ಸ್ಕೌಟ್ಸ್ ಗೈಡ್ಸ್ ಸಂಸ್ಥೆಗೆ ಸದಸ್ಯನಾಗ ಬೇಕಿದ್ದ ನಾನು ರಾಜಕೀಯದೆಡೆಗೆ ಆಕರ್ಷಿತನಾದೆ. ಆದರೆ

ಈಗಲೂ ಈ ಸಂಸ್ಥೆಯ ಒಲವು ನನ್ನಲ್ಲಿದೆ. ಯಾವ ಸಂದರ್ಭದಲ್ಲಾದರೂ ಈ ಸಂಸ್ಥೆಯ ಕೆಲಸ ಮಾಡುವುದಾಗಿ ಭರವಸೆ ನೀಡಿದರು.

ನಂತರ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿಯವರು ಅಧ್ಯಕ್ಷೀಯ ನುಡಿಗಳನ್ನು ನುಡಿದರು. ಜಿಲ್ಲಾ ಆಯುಕ್ತರಾದ (ಸ್ಕೌಟ್ಸ್) ಶ್ರೀ ಉಮೇಶ್ ಶಾಸ್ತ್ರಿರವರು ವಂದಿಸಿದರು. ಶ್ರೀ ಎ.ವಿ. ರಾಜೇಶ್‌ರವರು ಕಾರ್ಯಕ್ರಮವನ್ನು ನಿರೂಪಿಸಿದರು, ಈ ಕಾರ್ಯಕ್ರಮದಲ್ಲಿ ವಿವಿಧ ಶಾಲೆಗಳ ಕಬ್ಸ್, ಸ್ಕೌಟ್ಸ್, ರೋವರ್ಸ್, ಬುಲ್ಸ್ ಬುಲ್ಸ್, ಗೈಡ್ಸ್, ರೇಂಜರ್ಸ್ ಹಾಗೂ ಗೈಡ್ಸ್ ಕ್ಯಾಪ್ಟನ್, ಸ್ಕೌಟ್ ಮಾಸ್ಟರ್ಸ್‌ಗಳು ಎಲ್ಲಾ ತಾಲ್ಲೂಕುಗಳ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು, ಎ.ಡಿ.ಸಿಗಳು, ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.



ಸೈಕಲ್ ಜಾಥಾದಲ್ಲಿ ಪಾಲ್ಗೊಂಡಿರುವ ಶಿವಮೊಗ್ಗ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್‌ಗಳು

## Bengaluru North

*Saturday the 1st August 2015 was a memorble day for the Scouts & Guides of Sindhi High School, Hebbal in particular and the Bengaluru North District in General as they achieved another milestone by adopting a small Hamlet named 'Bidalapura' near Devanahalli Taluk. Adoption of the village was part of the Birth Centenary Celebrations of Late Kondajji Basappa. It was honour to have dignitaries from State HQ, Bengaluru Rural District and Local Panchayat members. The officials who graced the occasion from Bengaluru North Districts were Miss. P. Saroja, District Chief Commissioner, Mr. Prem Kumar, District Commissioner (Scouts), Mr. B.K. Sheshadri, District Secretary. Mr. A.M. Shankar, Asst. State Organizing Commmissioner, Rural District was represented by Mr. Nagarag, District Commissioner (Scouts), Mr. B.K. Shivappa, District President, Bidalapura Gram Panchayat was represented by Mr. Mahesh, Mr. Kariappa, Mr. Lalitesh, Mr. Jayanth, Mr. Rajanna, & Mrs. Jyothi.*

*The Inaugural function started off with the lighting of the lamp by the officials followed by a melodious rendition by Sindhi School choir, Mr. B.R. Ramesh, Scout Master read out the proposed activities scheduled for the year in the village. Mrs. P. Saroja who accepted to be the Chief Guest in place of Mr. Siddaiah, State Secretary, who couldn't grace the occasion due to other pressure of Work. She appreciated the initiative taken by Sindhi High School, under the able guidance of their Principal Ms. Vimala Mallappa. She thanked them and said that this venture had the support and co-operation of all the Officials of Bengaluru North District. She also announced that materials worth Rs. 5000/- would be gifted by Bengaluru North District to support the initiatives taken by Sindhi High School.*

*The chair person of the Programme was Senior Citizen of the village Mr. Munibyrappa, who wished the Scouts and Guides, success in all their future endeavours. The Sindhi Scouts & Guides performed a folk dance for which they were applauded by everyone.*

*5 Boys & 5 Girls of Bidalapur Government Higher Primary School were given scarves and inducted into the Scout & Guide movement to carry on the Scout and Guide activities of Sindhi High School.*

*Free note Books and Stationery were distributed by the Officials to the Government School children along with Ribbons, National flags, etc.*

## ರಾಯಚೂರು

ದಿನಾಂಕ : 08-08-2015 ಭಾರತ್ ಸ್ಕೌಟ್ಸ್ – ಗೈಡ್ಸ್ ಜಿಲ್ಲಾ ಸಂಸ್ಥೆಯು ವತಿಯಿಂದ ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವದ ಸ್ಮರಣಾರ್ಥವಾಗಿ ರೋವರ್ಸ್ ಮತ್ತು ರೇಂಜರ್ಸ್‌ಗಳ ಚಳವಳಿಯನ್ನು ಸಮಾಜಕ್ಕೆ ಪರಿಚಯಿಸುವ ಮತ್ತು ಪ್ರಚಾರಿಸುವ ಕುರಿತು ಸ್ಕೌಟ್ಸ್-ಗೈಡ್ಸ್ & ರೋವರ್ಸ್-ರೇಂಜರ್ಸ್‌ಗಳಿಂದ ಸೈಕಲ್ ಜಾಥಾ ಕಾರ್ಯಕ್ರಮವನ್ನು ಜಿಲ್ಲಾ ಕ್ರೀಡಾಂಗಣದಲ್ಲಿ ಶ್ರೀ ಚಂದ್ರಶೇಖರ್ ನೀಲಗಾರ, ಡಿ.ವೈಎಸ್.ಪಿ. ರಾಯಚೂರು ಹಾಗೂ ಶ್ರೀ ಅಯ್ಯನಗೌಡ ಪಾಟೀಲ್ ಪಿ.ಎಸ್.ಐ. ನಗರ ಸಂಚಾರ ಪೊಲೀಸ್ ಠಾಣೆ ರಾಯಚೂರು ಇವರು ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು.

ದಿನಾಂಕ 09-10-2015 ರಂದು ಜಾಥಾವು ನಗರದ ಬಸವೇಶ್ವರ ಸರ್ಕಲ್-ಗಾಂಧಿ ಚೌಕ್-ಚಂದ್ರಮೌಳೇಶ್ವರ ಸರ್ಕಲ್-ಪಟೇಲ್ ಚೌಕ್-ಶೇಟ್ಟಿ ಭಾವಿ ಚೌಕ್-ತೀನ್ ಕಂದಿಲ್-ಮಹಿಳಾ ಸಮಾಜ-ಕೇಂದ್ರ ಬಸ್ ನಿಲ್ದಾಣ-ಅಂಬೇಡ್ಕರ್ ಸರ್ಕಲ್ ಮಾರ್ಗವಾಗಿ ರೈಲ್ವೆ ನಿಲ್ದಾಣಕ್ಕೆ ಬಂದು ಸೇರಿತು. ಅಲ್ಲಿ ಶ್ರೀ ಅಮರೇಗೌಡ ಪಾಟೀಲ್ ಮಾತನಾಡಿ, ಕರ್ನಾಟಕದಲ್ಲಿ ಸ್ಕೌಟಿಂಗ್/ಗೈಡಿಂಗ್‌ನ ಅಭಿವೃದ್ಧಿಗಾಗಿ ಕಂಕಣಬದ್ಧರಾಗಿ ದುಡಿದ ಮಹನೀಯರು ಚಳವಳಿಯ ಅಭಿವೃದ್ಧಿಗಾಗಿ ಅಧಿಕಾರಿಗಳ ಮನೆ ಮನೆಗೆ ತೆರಳಿ ಮಕ್ಕಳಿಗಾಗಿ ವಿವಿಧ ಯೋಜನೆಗಳನ್ನು ರೂಪಿಸಿ ಜಾರಿಗೆ ತಂದು ಚಳವಳಿಯನ್ನು ಅಮೋಘವಾಗಿ ಬೆಳೆಸಿದ ಹರಿಕಾರರು. ಈ ಮಹನೀಯರ ಜನ್ಮಶತಮಾನೋತ್ಸವವನ್ನು ಕರ್ನಾಟಕದಾದ್ಯಂತ ವಿಶೇಷವಾಗಿ ಆಚರಿಸುತ್ತಿರುವ ಸಂದರ್ಭದಲ್ಲಿ ರಾಯಚೂರು ಜಿಲ್ಲಾ ಸಂಸ್ಥೆಯು ಅವರಿಗೆ ಇಂಥ ಕಾರ್ಯಕ್ರಮಗಳನ್ನು ಮಾಡಿ ಜನರಿಗೆ ಪರಿಚಯಿಸುವ ಕಾರ್ಯ ಮಾಡಲಾಗುತ್ತಿದೆ ಎಂದರು. ಈ ಸಂದರ್ಭದಲ್ಲಿ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ಅಜೀಜಾ ಸುಲ್ತಾನ ಹಾಗೂ 150 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಜಾಥಾದಲ್ಲಿ ಭಾಗವಹಿಸಿದ್ದರು.

## ಕೊಪ್ಪಳ

ದಿನಾಂಕ 15-10-2015 ರಂದು ಕೊಂಡಜ್ಜಿ ಬಸಪ್ಪನವರ ಸ್ಮರಣಾರ್ಥ ಶಾರದಾ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ಒಂದು ದಿನದ ಹೊರಸಂಚಾರ ಶಿಬಿರವನ್ನು ಅಶೋಕ ಶಿಲಾಸ್ತಂಭದಲ್ಲಿ ನಡೆಸಲಾಯಿತು. ಮುಂಜಾನೆಯಿಂದ ಸಂಜೆಯವರೆಗೆ ವಿವಿದ ಚಟುವಟಿಕೆಗಳನ್ನು ನಡೆಸಲಾಯಿತು. ನಂತರ ಮುಕ್ತಾಯ ಸಮಾರಂಭದಲ್ಲಿ ಶ್ರೀ ಮಲ್ಲಿಕಾರ್ಜುನ ಚೌಕಿಮಠ, ಜಿಲ್ಲಾ ಕಾರ್ಯದರ್ಶಿ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್‌ಗಳಿಗೆ ಒಳಾಂಗಣ – ಹೊರಾಂಗಣ ಚಟುವಟಿಕೆಗಳು ಇರಬೇಕು. ಇದರ ಜೊತೆಗೆ ಸಾರ್ವಜನಿಕರಿಗೆ ಅರಿವು ಮೂಡಿಸುವ ಕಾರ್ಯಕ್ರಮ ಹಮ್ಮಿಕೊಳ್ಳಬೇಕು ಎಂದು ಹೇಳಿದರು. ಇದರ ನಾಯಕತ್ವವನ್ನು ಶ್ರೀ ಎ.ಎಸ್. ಶಿವುಕುಮಾರ್, ಎ.ಎಸ್.ಓ.ಸಿ., ವಹಿಸಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ಮಹೇಶ ಜಾಲಿಹಾಳ, ಶ್ರೀ ಶಿವಯ್ಯ ಹಾಗು ಶಾಲೆಯ ಎಲ್ಲಾ ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.



**ದಿ. ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಸ್ಮರಣಾರ್ಥ ಕೊಪ್ಪಳ ಜಿಲ್ಲೆಯ ಕನಕಗಿರಿಯ ಭಗತ್‌ಸಿಂಗ್ ತಂಡದ ರೋವರ್ ಲೀಡರ್ "ಮನೆ ಒಂದು ಗಿಡ ನಾಲ್ಕು" ಸಸಿ ವಿತರಣಾ ಕಾರ್ಯಕ್ರಮದಲ್ಲಿ ಸಸಿಗಳನ್ನು ನೀಡುತ್ತಿರುವುದು**

## ಹಾವೇರಿ

ದಿನಾಂಕ 7-11-2015 ರಂದು ದಿ: ಕೊಂಡಜ್ಜಿ ಬಸಪ್ಪ ಅವರ ಸ್ಮರಣಾರ್ಥಕವಾಗಿ ಸಂಸ್ಥಾಪನಾ ದಿನಾಚರಣೆ ಧ್ವಜದಿನಾಚರಣೆ ಹಾಗು ಸೈಕಲ್ ಜಾಥಾ ಕಾರ್ಯಕ್ರಮವನ್ನು ನೌಕರರ ಭವನ ಹಾವೇರಿಯಲ್ಲಿ ಏರ್ಪಡಿಸಲಾಯಿತು. ಮಾನ್ಯ ಶ್ರೀ ಶ್ರೀನಿವಾಸಮಾಲಾ, ರೋಟರಿ ಗೌರ್ನರವರು ಧ್ವಜ ಚೀಟಿಯನ್ನು ಬಿಡುಗಡೆ ಮಾಡಿದರು. ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀಮತಿ ಮಾಧುರಿ ದೇವಧರ, ಶ್ರೀ ಮಲ್ಲಿಕಾರ್ಜುನ ಕೋಟೂರ, ಶ್ರೀ ಶರತ್ ಮಲ್ಲನಗೌಡ, ಶ್ರೀ ರವಿ ಹಿಂಚಿಗೇರಿ, ಶ್ರೀ ವಜ್ರಕುಮಾರ, ಶ್ರೀ ಎಂ.ಎಚ್. ಖಾನ, ಜಿಲ್ಲಾ ಸಮನ್ವಯಾಧಿಕಾರಿಗಳು, ಡಿ.ಡಿ.ಪಿ.ಐ. ಕಛೇರಿ, ಶ್ರೀಮತಿ ಪರಿಮಳ ಜೈನ್, ಸಹಕಾರ್ಯದರ್ಶಿ ಎಮ್. ಎನ್. ಕರ್ಜಗಿ, ಶ್ರೀ ಎ.ಎಲ್. ಶೇಖಸೂರಣಗಿ ಶ್ರೀ ಎಮ್.ಆರ್. ಪಾಟೀಲ, ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಸ್ಕೌಟ್ಸ್ ಮತ್ತು ರೋವರ್ಸ್ ಸೈಕಲ್ ಜಾಥಾವನ್ನು ಶ್ರೀ ಎಮ್.ಎಚ್. ಖಾನ ಜಿಲ್ಲಾ ಸಮನ್ವಯಾಧಿಕಾರಿಗಳು, ಡಿ.ಡಿ.ಪಿ.ಐ. ಕಛೇರಿ ಹಾವೇರಿ ಉದ್ಘಾಟನೆ ಮಾಡಿದರು.

## ಚಾಮರಾಜನಗರ

ಶ್ರೀ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವದ ಅಂಗವಾಗಿ ಸೇಂಟ್ ಜೋಸೆಫ್ ಹೈಯರ್ ಪ್ರೈಮರಿ ಶಾಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸೈಕಲ್ ಜಾಥಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ವಿ. ಮಲ್ಲಿಕಾರ್ಜುನಸ್ವಾಮಿ ಜಿಲ್ಲಾ ಆಯುಕ್ತರು ಉದ್ಘಾಟಿಸಿದರು. ಸ್ಕೌಟ್ ಸಪ್ತಾಹ ಕಾರ್ಯಕ್ರಮದಡಿಯಲ್ಲಿ ಚಾಮರಾಜನಗರ ಜಿಲ್ಲಾ ಪಂಚಾಯತಿ ಕಟ್ಟಡದ ಆವರಣ ಸುತ್ತಲೂ, ಹೂದೋಟದಲ್ಲಿರುವ ಕಸ-ಕಡ್ಡಿಗಳನ್ನು ಆಯ್ದು ಸ್ವಚ್ಛಗೊಳಿಲಾಯಿತು.

ದಿ॥ ಕೊಂಡಜ್ಜಿ ಬಸಪ್ಪನವರ ಸ್ಮರಣಾರ್ಥ ಚಾಮರಾಜನಗರ ಜಿಲ್ಲೆಯಿಂದ 4, ಮೈಸೂರು ಜಿಲ್ಲೆಯಿಂದ 7 ಪ್ರೀ ಎ.ಎಲ್.ಟಿ. ಮತ್ತು ಎ.ಎಲ್.ಟಿ. ತರಬೇತಿ ಹೊಂದಿದವರಿಗೆ ಕ್ವಿಜ್ ಕಾರ್ಯಕ್ರಮ ಹಾಗೂ ಕೊಂಡಜ್ಜಿ ಬಸಪ್ಪನವರ ಜೀವನ ಚರಿತ್ರೆ ತಿಳಿಸಲಾಯಿತು. ಶ್ರೀ ಬಿ.ಎಸ್. ಶರಾಪ್‌ಮಾದಪ್ಪನವರು ನಾಯಕರಾಗಿ, ಶ್ರೀ ವಿ.ಎಂ. ರಾಮಚಂದ್ರ, ಶ್ರೀ ಕೆ.ಜಿ. ಗೋಪಾಲಕೃಷ್ಣರವರು ಸಹಾಯಕರಾಗಿದ್ದರು. ಸ.ಹಿ.ಪ್ರಾ.ಶಾಲೆ, ಉಪ್ಪಾರಗೇರಿ ಶಾಲೆ ಚಾಮರಾಜನಗರದಲ್ಲಿ ಕಾರ್ಯಕ್ರಮ ಜರುಗಿತು.

## ಚಿತ್ರದುರ್ಗ

ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಪ್ರಯುಕ್ತ ದಿನಾಂಕ 12-12-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಭವನ, ಚಿತ್ರದುರ್ಗ ಇಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಚಿತ್ರದುರ್ಗ, ರೋಟರಿ ಕ್ಲಬ್, ವಿಂಡ್‌ಮಿಲ್ ಸಿಟಿ, ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಇಲಾಖೆ, ಜಿಲ್ಲಾ ಅಂಧತ್ವ ನಿಯಂತ್ರಣಾ ಸಂಸ್ಥೆ, ತಾಲ್ಲೂಕು ಆರೋಗ್ಯಾಧಿಕಾರಿಗಳು, ಚಿತ್ರದುರ್ಗ ಇವರೆಲ್ಲರ ಸಹಕಾರದೊಂದಿಗೆ "ಉಚಿತ ನೇತ್ರ ತಪಾಸಣೆ ಮತ್ತು ಶಸ್ತ್ರ ಚಿಕಿತ್ಸಾ ಶಿಬಿರ" ಕಾರ್ಯಕ್ರಮ ಜರುಗಿತು. ಜಿಲ್ಲೆಯ ನಾನಾ ಭಾಗಗಳಿಂದ ಹಾಗೂ ಚಿತ್ರದುರ್ಗ ನಗರದ 500ಕ್ಕೂ ಹೆಚ್ಚು ಫಲಾನುಭವಿಗಳು ಚಿಕಿತ್ಸೆಗಾಗಿ ಆಗಮಿಸಿದ್ದರು ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಎಂ. ರೇವಣಸಿದ್ಧಪ್ಪ, ಡಿ.ಡಿ.ಪಿ.ಐ., ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗು ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ಇವರು ಸಸಿಗಳಿಗೆ ನೀರು ಹಾಕುವುದರೊಂದಿಗೆ ನೆರವೇರಿಸಿದರು.

ಖ್ಯಾತ ನೇತ್ರ ತಜ್ಞರಾದ ಡಾ॥ ಕೆ. ನಾಗರಾಜ್ ಕೊಂಡ್ಲಹಳ್ಳಿಯವರು ಕಣ್ಣು ಮಾನವನ ಅತ್ಯಮೂಲ್ಯ ಅಂಗ. ಉಚಿತ ತಪಾಸಣೆ, ಶಸ್ತ್ರ ಚಿಕಿತ್ಸೆ ಇರುವುದರಿಂದ, ಇದರ ಲಾಭವನ್ನು ಎಲ್ಲರೂ ಪಡೆಯಿರಿ ಮತ್ತು ಈ ಕಾರ್ಯಕ್ರಮವನ್ನು ಸಂಘಟಿಸಿರುವ ಸಂಘಟನೆಗಳಿಗೆ ಧನ್ಯವಾದಗಳನ್ನು ಹೇಳಿರಿ ಎಂದು ಪ್ರಾಸ್ತಾವಿಕ ನುಡಿ ನುಡಿದರು.

## ಗದಗ

ಸ್ಪರ್ಧಾತ್ಮ ಯುಗದಲ್ಲಿರುವ ಎಲ್ಲಾ ವಿದ್ಯಾರ್ಥಿಗಳು ಸ್ಪರ್ಧೆಯಲ್ಲಿ ಭಾಗವಹಿಸಿ ಗುರಿಯನ್ನು ಸಾಧಿಸುವ ಛಲವನ್ನು ಹೊಂದಬೇಕು ಎಂದು ಶ್ರೀ ಪಿ.ಎಮ್. ಬಂದಕ್ಕನವರ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲೂಕಾ ಸಂಸ್ಥೆ ಗದಗ ಗ್ರಾಮೀಣದ ಕಾರ್ಯಾಧ್ಯಕ್ಷರು ಹೇಳಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲೂಕಾ ಸಂಸ್ಥೆ ಗದಗ ಗ್ರಾಮೀಣ ವತಿಯಿಂದ ಶ್ರೀ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವದ ಪ್ರಯುಕ್ತ ಏರ್ಪಡಿಸಿದ್ದ ಸ್ಪರ್ಧೆಗಳ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದರು.



ಕಾರ್ಯಕ್ರಮವನ್ನು ಉದ್ಘಾಟಿಸಿದ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎನ್.ಸಿ. ಮುಕ್ಕಣ್ಣನವರ ಪ್ರತಿ ವಿದ್ಯಾರ್ಥಿಗಳಲ್ಲಿಯೂ ವಿಶಿಷ್ಟವಾದ ಪ್ರತಿಭೆ ಇರುತ್ತದೆ. ಇಂತಹ ಸ್ಪರ್ಧೆಗಳ ಮೂಲಕ ಆ ಪ್ರತಿಭೆ ಹೊರ ಹೊಮ್ಮಬೇಕು ಎಂದು ಹೇಳಿದರು. ಶ್ರೀ ಸಿ.ಎನ್. ತೋಟಪ್ಪನವರ ಜಿಲ್ಲಾ ತರಬೇತಿ ಆಯುಕ್ತರು ಉಪನ್ಯಾಸ ನೀಡುತ್ತಾ ಶ್ರೀ ಕೊಂಡಜ್ಜಿ ಬಸಪ್ಪನವರು ಸಾಮಾನ್ಯ ಕುಟುಂಬದಲ್ಲಿ ಜನಿಸಿ ವಿಶಿಷ್ಟ ಪ್ರತಿಭೆ ಮತ್ತು ಸಾಮಾಜಿಕ ಸೇವಾ ಮನೋಭಾವನೆಯಿಂದ ರಾಷ್ಟ್ರೀಯ ನಾಯಕರಾಗಿ ಬೆಳೆದರು. ಅಲ್ಲದೇ ಅವರು ಸ್ಕೌಟ್ಸ್-ಗೈಡ್ಸ್‌ಗೆ ಸಲ್ಲಿಸಿದ ಸೇವೆ ಶ್ಲಾಘನೀಯ ಎಂದು ಹೇಳಿದರು.

ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀ ವಿ.ಎಮ್ ಹಿರೇಮಠ, ಜಿಲ್ಲಾಧ್ಯಕ್ಷರು, ಪ್ರಾಥಮಿಕ ಶಾಲಾ

ಶಿಕ್ಷಕರ ಸಂಘ, ಗದಗ ಮತ್ತು ಶ್ರೀ ಜಿ.ಹೆಚ್. ಪೂಜಾರ, ಪ್ರಧಾನ ಕಾರ್ಯದರ್ಶಿಗಳು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಗದಗ ಸಮಾರಂಭವನ್ನು ಉದ್ದೇಶಿಸಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ಶ್ರೀ ಎನ್. ವಿ. ಕಿತ್ತೂರ ಮತ್ತು ಶ್ರೀ ಬಿ.ಎಚ್. ಚಿಂಚಲಿ, ಶ್ರೀಮತಿ ಆರ್ ಕೆ. ಹಳ್ಯಾಳ, ಸಂಸ್ಥೆಯ ನಿರ್ದೇಶಕರು ಶ್ರೀ ಎಮ್. ವಿ. ಬಸರಿಕಟ್ಟೀ, ಉಪಾಧ್ಯಕ್ಷರು, ಪ್ರಾ.ಶಾ.ಶಿ. ಸಂಘ, ಗದಗ ತಾಲೂಕಾ ಶ್ರೀ ಬಿ.ಬಿ. ಹಡಪದ, ಕಾರ್ಯದರ್ಶಿಗಳು, ಪ್ರಾ.ಶಾ.ಶಿ.ಸಂಘ, ಗದಗ ತಾಲೂಕಾ ಶ್ರೀ ವಿ.ಬಿ. ಪೋಲಿಸ್ ಪಾಟೀಲ, ರಾಜ್ಯ ಪರಿಷತ್ ಸದಸ್ಯರು, ಎನ್.ಜಿ. ಶ್ರೀ ಜಿ.ಸ್. ಗೌಡರ ಸಹ ಕಾರ್ಯದರ್ಶಿಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಗದಗ ಶ್ರೀಮತಿ ಎ.ಜಿ. ಹೆರಕಲ್ ಕೋಶಾಧ್ಯಕ್ಷರು ಶ್ರೀಮತಿ ಎಫ್.ಎಮ್. ಅಣ್ಣಿಗೇರಿ, ಗೈಡರ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲ್ಲೂಕು ಸಂಸ್ಥೆ, ಗದಗ ಗ್ರಾಮೀಣ ಇವರು ಉಪಸ್ಥಿತರಿದ್ದರು.

## ವಿಜಯಪುರ

ದೇಶಕಂಡ ಅಪರೂಪದ ರಾಜಕಾರಣಿ, ಸಮಾಜ ಸೇವಕ ಸ್ಕೌಟ್ಸ್–ಗೈಡ್ಸ್ ಪೋಷಕರಾಗಿದ್ದ ಕೊಂಡಜ್ಜಿ ಬಸಪ್ಪನವರು ಜನಮಾನಸಕ್ಕೆಲ್ಲ ಒಬ್ಬ ವ್ಯಕ್ತಿಯಾಗಿರದೆ ನವಚೈತನ್ಯದ ಶಕ್ತಿಯಾಗಿದ್ದರು. ಎಂದು ಶ್ರೀ ಶರಣು ಸಬರದ ಹೇಳಿದರು. ಜಿಲ್ಲಾ ಸ್ಕೌಟ್ ಭವನದಲ್ಲಿ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು. ಕರ್ನಾಟಕದ ಸ್ಕೌಟ್ಸ್–ಗೈಡ್ಸ್ ಬೆಳವಣಿಗೆಯಲ್ಲಿ ಕೊಂಡಜ್ಜಿ ಬಸಪ್ಪನವರ ಕುರಿತು ಉಪನ್ಯಾಸವನ್ನು ಶ್ರೀ ಎಸ್. ಪಾಟೀಲ ಅವರು ನೀಡಿ, ಅವರ ಜೀವನ ಸಾಧನೆ ಮತ್ತು ಸ್ಕೌಟ್ಸ್ ಚಳುವಳಿಯು ನಡೆದು ಬಂದ ದಾರಿಯನ್ನು ಪರಿಚಯಿಸಿದರು.

ವೇದಿಕೆಯ ಮೇಲೆ ಸರ್ವಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಶ್ರೀ ಬಿ.ಎಂ. ಬಡಿಗೇರ, ಶ್ರೀ ಪಿ.ಎಸ್. ಕುಂಬಾರ, ಶ್ರೀ ಡಿ.ಎಲ್. ಪಿಂಜಾರ ಮತ್ತು ಶ್ರೀಮತಿ ಗಂಗುಬಾಯಿ ಬಿಸನಾಳ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಜಿಲ್ಲೆಯ 105 ಸ್ಕೌಟರ್–ಗೈಡರ್ ಪಾಲ್ಗೊಂಡಿದ್ದರು. ಶ್ರೀ ಜಿ.ಬಿ. ಗಳವೆ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಬಿ.ಎಂ. ಬಡಿಗೇರ ಸ್ವಾಗತಿಸಿದರು. ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ವಂದಿಸಿದರು.

ಶಿಕ್ಷಕ ಬಳಗವು ವೃತ್ತಿ ಜೀವನದಲ್ಲಿ ಹತ್ತು ಹಲವು ತರಬೇತಿಗಳ ಮೂಲಕ ವಿವಿಧ ತರಬೇತಿಗಳನ್ನು ಪಡೆಯುತ್ತಿದ್ದು ಅದನ್ನು ಪ್ರಾಮಾಣಿಕವಾಗಿ ತಮ್ಮ ತಮ್ಮ ಶಾಲಾ ಮಕ್ಕಳಿಗೆ ತಲುಪಿಸುವ ಕಾರ್ಯ ಮಾಡಬೇಕು ಎಂದು ಜಿಲ್ಲಾ ಪ್ರಧಾನ ಆಯುಕ್ತ ಶ್ರೀ ಸಿದ್ದಣ್ಣ ಸಕ್ರಿ ಹೇಳಿದರು. ನಗರದ ಸ್ಕೌಟ್ಸ್ ಭವನದಲ್ಲಿ ಜಿಲ್ಲಾ ಸಂಸ್ಥೆಯಿಂದ ನಡೆಸಲಾದ ಸ್ಕೌಟರ್ಸ್–ಗೈಡರ್ಸ್ ಸಮಾವೇಶದಲ್ಲಿ ಪಾಲ್ಗೊಂಡು ಮಾತನಾಡಿದ ಅವರು ಪಡೆದ ಸಂಪನ್ಮೂಲ ಸದ್ಬಳಕೆಯಾಗದಿದ್ದರೆ ಅದು ಅಪರಾಧವಾದೀತು ಎಂದು ಎಚ್ಚರಿಕೆ ನೀಡಿ ಶಾಲೆಯಲ್ಲಿ ಕಡ್ಡಾಯವಾಗಿ ಸ್ಕೌಟ್ಸ್–ಗೈಡ್ಸ್ ದಳಗಳನ್ನು ಕ್ರಿಯಾಶೀಲವಾಗಿ ಮುನ್ನಡೆಸುವಂತೆ ಸಲಹೆ ಮಾಡಿದರು.

ಜಿಲ್ಲೆಯ ವಿವಿಧ ಶಾಲೆಗಳಿಂದ ಪಾಲ್ಗೊಂಡ 105 ಸ್ಕೌಟರ್–ಗೈಡರ್ ಅವರಿಗೆ ದಳ ಮುನ್ನಡೆಯುವ ನಿಟ್ಟಿನಲ್ಲಿ ಶ್ರೀ ಪರಶುರಾಮ ಕುಂಬಾರ, ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಹಾಗೂ ಶ್ರೀಮತಿ ಗಂಗೂಬಾಯಿ ಬಿಸನಾಳ ಮಾರ್ಗದರ್ಶನ ನೀಡಿದರು.

## ಯಾದಗಿರಿ

ದಿನಾಂಕ 07-11-2015 ರಂದು ಸಂಸ್ಥಾಪನಾ ದಿನಾಚರಣೆಯುನ್ನು ಮಾನ್ಯ ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ ಏರ್ಪಡಿಸಲಾಯಿತು. ಜಿಲ್ಲಾಧಿಕಾರಿಗಳಾದ ಶ್ರೀ ಮನೋಜ್ ಜೈನ್, ಧ್ವಜ ಚೀಟಿ ಬಿಡುಗಡೆ ಮಾಡಿದರು. ಹಾಗೂ ಸೈಕಲ್ ಜಾಥಕ್ಕೆ ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ವಿನಾಯಕ ಪಾಟೀಲ್, ಜಿಲ್ಲಾ ಪಂಚಾಯತ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾದ ಶ್ರೀ ವಿಕಾಸ್, ಶ್ರೀ ಕಿಶೋರ್ ಸುರಾಳ್‌ಕರ್, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎಂ. ಪಟ್ಟೇದಾರ್, ಜಿಲ್ಲಾ ಖಜಾಂಚಿ ಶ್ರೀ ಬಾಬು ದೋಕಾ, ಜಿಲ್ಲಾ ಆಯುಕ್ತರು(ಗೈ) ಶ್ರೀಮತಿ ನಾಗರತ್ನ ಅನಪೂರ, ಜಿಲ್ಲಾ ತರಬೇತುದಾರ ಶ್ರೀ ರಾಜೇಂದ್ರ ಜಿಲ್ಲಾ ಸಂಘಟನಾ ಆಯುಕ್ತರಾದ, ಶ್ರೀ ರಾಘವೇಂದ್ರ, ಜಿಲ್ಲಾ ಸಂಘಟಕರು (ಗೈ) ಶ್ರೀಮತಿ ನಾಗರತ್ನ ಪಾಟೀಲ್ 35 ಸ್ಕೌಟ್ ಮಾಸ್ಟರ್ಸ್, 25 ಗೈಡ್ ಕ್ಯಾಪ್ಟನ್‌ಗಳು 85 ಸ್ಕೌಟ್ಸ್, 45 ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.





ದಿ. ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಕಾರ್ಯಕ್ರಮದಲ್ಲಿ ಯಾದಗಿರಿ ಜಿಲ್ಲೆಯ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಶಂಕರ್ ಸೋನಾರ್, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ನಾಗರತ್ನ ಅನಪೂರ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಪಟ್ಟೇದಾರ್ ಹಾಗೂ ಇತರರು ಚಿತ್ರದಲ್ಲಿದ್ದಾರೆ

## ಕೋಲಾರ



ದಿನಾಂಕ 02, ಜನವರಿ 2016ರಂದು ಕೋಲಾರದಲ್ಲಿ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಆಚರಣೆ ಪ್ರಯುಕ್ತ ಹಮ್ಮಿಕೊಂಡಿದ್ದ ಜಿಲ್ಲಾ ಮೇಳವನ್ನು ಮಾನ್ಯ ಸಂಸದರಾದ ಶ್ರೀ ಕೆ.ಹೆಚ್. ಮುನಿಯಪ್ಪ ಗಿಡಕ್ಕೆ ನೀರೆರೆಯುವುದರ ಮೂಲಕ ಉದ್ಘಾಟಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ರಾಜ್ಯ ಗೈಡ್ಸ್ ಆಯುಕ್ತೆ ಶ್ರೀಮತಿ ಗೀತಾ ನಟರಾಜ್, ರಾಜ್ಯ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.

## ಉಡುಪಿ



ಸೈಕಲ್ ಜಾಥಾದಲ್ಲಿ ಪಾಲ್ಗೊಂಡಿರುವ ಉಡುಪಿ ಜಿಲ್ಲೆಯ ಸ್ಕೌಟ್ಸ್‌ಗಳು

# 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಜಾಂಬೋರೇಟ್

**ದಿನಾಂಕ: 17.01.2015ರಿಂದ 23.01.2015**

**ಬೆಂ**ಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ 2015ರ ಜನವರಿ 17ರಿಂದ 23ರವರೆವಿಗೆ ಏಳುದಿನ ನಡೆದ 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಜಾಂಬೋರೇಟ್ ಅವಿಸ್ಮರಣೀಯವಾಗಿತ್ತು. ಈ ಜಾಂಬೋರೇಟ್‌ನಲ್ಲಿ 5000 ಸ್ಕೌಟ್ಸ್/ಗೈಡ್ಸ್/ರೋವರ್ಸ್/ ರೇಂಜರ್ಸ್, ದಳನಾಯಕ/ನಾಯಕಿಯರು, ತರಬೇತುದಾರರು, ಜಿಲ್ಲಾ ಮತ್ತು ರಾಜ್ಯ ಮಟ್ಟದ ಪದಾಧಿಕಾರಿಗಳು ಸರ್ಕಾರದ ಎಲ್ಲಾ ಇಲಾಖೆಯ ಅಧಿಕಾರಿಗಳು-ಸಾರ್ವಜನಿಕರು ಮತ್ತು ಪೋಷಕರು ಚಳವಳಿಯ ಹಿತೈಷಿಗಳು ಭಾಗವಹಿಸಿದ್ದರು.

27ನೇ ಜಾಂಬೋರೇಟ್‌ನ್ನು ದಿವಂಗತ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಸ್ಮರಣಾರ್ಥ ಆಚರಿಸಲಾಗಿದೆ. ಕೊಂಡಜ್ಜಿ ಬಸಪ್ಪನವರು ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಸಚಿವರಾಗಿದ್ದವರು. ಸಕ್ರಿಯ ರಾಜಕಾರಣದಲ್ಲಿದ್ದುಕೊಂಡೇ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಅವರ ಕೊಡುಗೆ ಅಪಾರವಾದದ್ದು. ಹದಿನೆಂಟು ವರ್ಷ ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿದ ಅವಧಿಯಲ್ಲಿಯೇ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದಲ್ಲಿ 100 ಎಕರೆಗಳ ಡಾ॥ ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರವನ್ನು ಅಭಿವೃದ್ಧಿಗೊಳಿಸಿದರು ಹಾಗೂ ದಾವಣಗೆರೆ ಸಮೀಪ ಕೊಂಡಜ್ಜಿಯಲ್ಲಿ 80 ಎಕರೆಗಳ ವಿಸ್ತೀರ್ಣದಲ್ಲಿ ಸ್ಕೌಟ್ಸ್ ಹಾಗೂ ಗೈಡ್ಸ್‌ಗಾಗಿ ತರಬೇತಿ ಮತ್ತು ಶಿಬಿರ ಕೇಂದ್ರವನ್ನು ಸರ್ಕಾರದಿಂದ ಮಂಜೂರು ಮಾಡಿಸಿ ಅಭಿವೃದ್ಧಿಗೊಳಿಸಿದರು. ದಿವಂಗತ ಕೊಂಡಜ್ಜಿ ಬಸಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ನೀಡಿರುವ ಶಾಶ್ವತ ಕೊಡುಗೆಗಳು ಹಾಗೂ ನಿಸ್ವಾರ್ಥ ಸೇವೆಯನ್ನು ನೆನೆಯುತ್ತಾ ಈ ಜಾಂಬೋರೇಟನ್ನು ಅವರ ಗೌರವಾರ್ಥವಾಗಿ ಅವರಿಗೆ ಸಮರ್ಪಿಸಲಾಗಿದೆ.

ಈ ಜಾಂಬೋರೇಟ್‌ನ ಘೋಷವಾಕ್ಯ: "ನೆಲ-ಜಲ ರಕ್ಷಣೆ ನಮ್ಮ ಹೊಣೆ" ಎಂಬುದಾಗಿತ್ತು. ನೀರು, ಭೂಮಿಯ

ರಕ್ಷಣೆಯನ್ನು ಮಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ ಎಂಬುದೇ ಈ ಘೋಷವಾಕ್ಯದ ಅರ್ಥವಾಗಿದೆ. ಜಾಂಬೋರೇಟ್‌ಗಾಗಿಯೇ ವಿಶೇಷ ಗೀತೆಯನ್ನು ಜಾನಪದ ತಜ್ಞ ಶ್ರೀ ಗೊ.ರು. ಚನ್ನಬಸಪ್ಪ ಅವರು ರಚಿಸಿದ್ದರು. ಈ ಗೀತೆಗೆ ಸಂಗೀತ ವಿದೂಷಿ ಶ್ರೀಮತಿ ಕಸ್ತೂರಿಶ್ರೀಧರ್ ರಾಗಸಂಯೋಜನೆ ಮಾಡಿದ್ದರು. ಬೆಂಗಳೂರಿನ ಯಲಹಂಕದಲ್ಲಿರುವ ಎಂ.ಇ.ಎಸ್. ಶಾಲೆಯ ವಿದ್ಯಾರ್ಥಿಗಳು ಈ ಹಾಡನ್ನು ಸುಶ್ರಾವ್ಯವಾಗಿ ಹಾಡಿದರು. ಜಾಂಬೋರೇಟ್‌ನಲ್ಲಿ ಭಾಗವಹಿಸಿದ್ದ ಸ್ಕೌಟ್ ಮತ್ತು ಗೈಡ್ ವಿದ್ಯಾರ್ಥಿಗಳು ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಈ ಹಾಡಿಗೆ ಧ್ವನಿ ನೀಡಿ ಜನಪ್ರಿಯಗೊಳಿಸಿದರು.

ಈ ಜಾಬೋರೇಟ್‌ಗೆ ರಾಜ್ಯದ 33 ಜಿಲ್ಲೆಗಳಿಂದ ಆಗಮಿಸಿದ್ದ ಐದು ಸಾವಿರಕ್ಕೂ ಹೆಚ್ಚು ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್ ಹಾಗೂ ದಳನಾಯಕ/ನಾಯಕಿಯರುಗಳ ವಾಸ್ತವ್ಯಕ್ಕಾಗಿ ಎಲ್ಲಾ ರೀತಿಯ ಮೂಲ ಸೌಕರ್ಯಗಳನ್ನು ಸೃಷ್ಟಿಸಲಾಗಿತ್ತು. 400 ಗುಡಾರಗಳು, ಏಳೂ ದಿನಗಳ ಕಾಲ ಯಾವುದೇ ವ್ಯತ್ಯಾಸವಿಲ್ಲದೇ ನೀರು ಮತ್ತು ವಿದ್ಯುತ್ ಸೌಕರ್ಯ, ಬಿಸಿನೀರಿನ ವ್ಯವಸ್ಥೆ, 24 ಗಂಟೆಗಳ ಕಾಲ ತುರ್ತು ವೈದ್ಯಕೀಯ ಚಿಕಿತ್ಸಾ ಘಟಕ ಮತ್ತು ಪೊಲೀಸ್ ಭದ್ರತೆಯನ್ನು ಒದಗಿಸಲಾಗಿತ್ತು. ಆಹಾರ ಸಾಮಾಗ್ರಿಗಳು, ತರಕಾರಿ, ಹಣ್ಣು, ಹಾಲಿನ ಉತ್ಪನ್ನಗಳು, ಅಡಿಗೆ ಅನಿಲದ ಮಳಿಗೆಗಳನ್ನು ಸರ್ಕಾರದ ವಿವಿಧ ಇಲಾಖೆಗಳ ಮೂಲಕ ಯೋಜಿಸಲಾಗಿತ್ತು.

ಜನವರಿ 17ರ ಮುಂಜಾನೆಯಿಂದಲೇ ಸ್ಕೌಟ್ ಹಾಗೂ ಗೈಡ್‌ಗಳು, ತರಬೇತಿ ನಾಯಕರುಗಳು ಮತ್ತು ದಳ ನಾಯಕ/ನಾಯಕಿಯರು ದೊಡ್ಡಬಳ್ಳಾಪುರದ ಶಿಬಿರ ಕೇಂದ್ರದಲ್ಲಿ ತಮಗೆ ನಿಗದಿಯಾಗಿದ್ದ ಬಿಡಾರಗಳಲ್ಲಿ ವಾಸ್ತವ್ಯ ಮಾಡಿದರು. ಅಂದು ರಾತ್ರಿ ನಡೆದ ಸುಂದರ "ಶಿಬಿರಾಗ್ನಿ ಕಾರ್ಯಕ್ರಮ"ದಲ್ಲಿ ಸ್ಥಳೀಯ ಶಾಲೆಗಳ ಪ್ರತಿಭೆಗಳು ಎಲ್ಲರ ಮನಸ್ಸನ್ನು ಸೂರೆಗೊಂಡವು. ಶ್ರೀ ಕೆ.ಎಂ. ಗುರುರಾಜ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಎನ್. ಹನುಮಂತೇಗೌಡ, ಜಿಲ್ಲಾ ಪಂಚಾಯಿತಿ ಸದಸ್ಯರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಬಿ.ಕೆ. ಶಿವಪ್ಪ, ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ಇವರುಗಳು ಈ ಶಿಬಿರಾಗ್ನಿಯಲ್ಲಿ ಉಪಸ್ಥಿತರಿದ್ದು ಕಾರ್ಯಕ್ರಮ ಯಶಸ್ವಿಗೊಳಿಸಿದರು.

ದಿನಾಂಕ 18.01.2015ರಂದು ಬೆಳಿಗ್ಗೆ ಕರ್ನಾಟಕ ರಾಜ್ಯದ ಘನತೆವೆತ್ತ ರಾಜ್ಯಪಾಲರೂ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ಪೋಷಕರಾದ ಗೌರವಾನ್ವಿತ ಶ್ರೀ ವಾಜುಭಾಯಿ ರೂಢಬಾಯಿ ವಾಲಾರವರು ಆಗಮಿಸಿದರು. ಗೌರವ ವಂದನೆಯನ್ನು ಸ್ವೀಕರಿಸಿದ ನಂತರ ರಾಜ್ಯಪಾಲರು 27ನೇ ಜಾಂಬೋರೇಟನ್ನು ಬಣ್ಣ-ಬಣ್ಣದ ಬಲೂನುಗಳನ್ನು ಆಕಾಶಕ್ಕೆ ಹಾರಿ ಬಿಡುವ ಮೂಲಕ ಉದ್ಘಾಟಿಸಿದರು. ಮಕ್ಕಳ ಹರ್ಷೋದ್ಗಾರವು ಆಕಾಶದತ್ತ ಏರುತ್ತಿರುವ ಬಲೂನಿನಂತೆ ಮುಗಿಲು ಮುಟ್ಟಿತ್ತು. ನಂತರ ಘನತೆವೆತ್ತ ರಾಜ್ಯಪಾಲರು ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವದ ಸ್ಮರಣಾರ್ಥ ಅಂಚೆ ಇಲಾಖೆ ಪ್ರಕಟಿಸಿದ ವಿಶೇಷ ಅಂಚೆ ಲಕೋಟೆ ಮತ್ತು My Stampಗಳನ್ನು ಬಿಡುಗಡೆ ಮಾಡಿದರು.

ಕರ್ನಾಟಕ ಸರ್ಕಾರದ ಇಂಧನ ಸಚಿವರಾದ ಮಾನ್ಯ ಶ್ರೀ ಡಿ.ಕೆ. ಶಿವಕುಮಾರ್, ಆರೋಗ್ಯ ಸಚಿವರಾದ ಮಾನ್ಯಶ್ರೀ ಯು.ಟಿ. ಖಾದರ್, ಸ್ಥಳೀಯ ಶಾಸಕರಾದ ಮಾನ್ಯಶ್ರೀ ಟಿ. ವೆಂಕಟರಮಣಯ್ಯ ಹಾಗೂ ಭಾರತ್ ಸ್ಕೌಟ್ಸ್ ಹಾಗೂ ಗೈಡ್ಸ್‌ನ ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ.ಐ. ನಾಗರಾಲೆ, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿದ್ದಯ್ಯ, ಭಾ.ಆ.ಸೇ. (ನಿವೃತ್ತ), ಕೋಶಾಧಿಕಾರಿ ಶ್ರೀ ಪ್ರಭುದೇವ ಜೆ. ಚಿಗಟೇರಿ, ಶ್ರೀ ಮೊಹಮ್ಮದ್ ಮೊಹಿಸಿನ್, ಭಾ.ಆ.ಸೇ. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಎಂ.ಎಸ್. ರಾಮಾನುಜಂ, ಮುಖ್ಯ ಅಂಚೆ ಪ್ರಧಾನಾಧಿಕಾರಿಗಳು, ಜಿಲ್ಲಾಧಿಕಾರಿ ಶ್ರೀಮತಿ ಸಲ್ಮಾ ಕೆ. ಫಾಹಿಮ್ ಹಾಗೂ ಜಿಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀಮತಿ ಸಿ.ಪಿ. ಶೈಲಜ, ಉಪಾಧ್ಯಕ್ಷರುಗಳಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಮತ್ತು ಶ್ರೀಮತಿ ಶಾಂತಾ ವಿ. ಆಚಾರ್ಯ ಸಭೆಯಲ್ಲಿ ಉಪಸ್ಥಿತರಿದ್ದರು. ಆರೋಗ್ಯ ಸಚಿವರಾದ ಮಾನ್ಯಶ್ರೀ ಯು.ಟಿ. ಖಾದರ್ ಅವರು ಸ್ಕೌಟ್ಸ್ ಸಮವಸ್ತ್ರದಲ್ಲಿ ಸಮಾರಂಭಕ್ಕೆ ಆಗಮಿಸಿ ವಿಶೇಷವಾಗಿ ಗಮನ ಸೆಳೆದರು.

ಸಮಾವೇಶವನ್ನುದ್ದೇಶಿಸಿ ಮಾತನಾಡಿದ ಘನತೆವೆತ್ತ ರಾಜ್ಯಪಾಲರು "ಪ್ರತಿಯೊಬ್ಬರೂ ಕಲಿಯಿರಿ- ಮತ್ತೊಬ್ಬರಿಗೆ ಕಲಿಸಿರಿ (Each one Teach one) ಎಂದು ಕರೆ ನೀಡುವ ಮೂಲಕ ಶಿಕ್ಷಣದ ಮಹತ್ವವನ್ನು ವಿವರಿಸಿದರು. ಅಂತೆಯೇ ಪ್ರತಿಯೊಬ್ಬ ಸ್ಕೌಟ್-ಗೈಡ್ ಮತ್ತೊಬ್ಬ ಸ್ಕೌಟ್-ಗೈಡ್‌ನನ್ನು ಕರೆ ತಂದರೆ (Each one bring one) ಸ್ಕೌಟ್-ಗೈಡ್ ಸಂಖ್ಯೆ ಇನ್ನು 3 ವರ್ಷಗಳಲ್ಲಿ 10 ಲಕ್ಷ ತಲುಪುವುದರಲ್ಲಿ ಸಂದೇಹವೇ ಇಲ್ಲವೆಂದರು. ಸಮಾರಂಭದಲ್ಲಿದ್ದ ಸ್ಕೌಟ್, ಗೈಡ್, ರೋವರ್

ಮತ್ತು ರೇಂಜರ್ ವಿದ್ಯಾರ್ಥಿಗಳಿಂದ "ಭಾರತ್ ಮಾತಾಕಿ ಜೈ" ಎಂಬ ಘೋಷಣೆಯನ್ನು ಮೂರ್‍ನಾಲ್ಕು ಬಾರಿ ಹೇಳಿಸಿದ ಗೌರವಾನ್ವಿತ ರಾಜ್ಯಪಾಲರು 'ಉತ್ತಮ ಪ್ರಜೆಯಾಗುವ ಹಂಬಲ ಎಲ್ಲಾ ವಿದ್ಯಾರ್ಥಿಗಳಲ್ಲಿಯೂ ಇರಬೇಕು, ಹಾಗೆಯೇ ದೇಶಪ್ರೇಮ ಮತ್ತು ಭಾವೈಕ್ಯತೆ ಬೆಳೆಸಿಕೊಳ್ಳಬೇಕೆಂದು' ಕರೆ ನೀಡಿದರು. ಸ್ಕೌಟ್ಸ್ ಮತ್ತು ಗೈಡ್ಸ್‌ನ ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ.ಐ. ನಾಗರಾಲೆ, ಜಾಂಬೋರೇಟ್ ಸಮಾವೇಶಕ್ಕೆ ಶುಭಕೋರಿದರು. ಗೌರವಾನ್ವಿತ ರಾಜ್ಯಪಾಲರನ್ನು, ಮಾನ್ಯ ಸಚಿವರುಗಳನ್ನು, ಶಾಸಕರನ್ನು, ಸರ್ಕಾರದ ಅಧಿಕಾರಿಗಳನ್ನು, ಸಾರ್ವಜನಿಕರನ್ನು ಹಾಗೂ ರಾಜ್ಯ ಮತ್ತು ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳನ್ನು, ರಾಜ್ಯದ ಎಲ್ಲಾ ಜಿಲ್ಲೆಗಳಿಂದ ಜಾಂಬೋರೇಟ್‌ನಲ್ಲಿ ಭಾಗವಹಿಸಿದ ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್ ಹಾಗೂ ದಳನಾಯಕರನ್ನು ಸ್ವಾಗತಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಕರ್ನಾಟಕ ಸ್ಕೌಟ್-ಗೈಡ್ ಚಳವಳಿ ಬೆಳೆದು ಬಂದ ದಾರಿಯನ್ನು ವಿವರಿಸಿ ಸಂಸ್ಥೆಯ ಬೆಳವಣಿಗೆಗೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಿದ್ದ ರಾಜ್ಯ ಮುಖ್ಯ ಆಯುಕ್ತರಾಗಿ ಅಪಾರ ಸೇವೆ ಸಲ್ಲಿಸಿದ್ದ ದಿ. ಕೊಂಡಜ್ಜಿ ಬಸಪ್ಪ ಅವರ ಜನ್ಮಶತಮಾನೋತ್ಸವ ಆಚರಣೆಯ ಪ್ರಯುಕ್ತ ಈ ಜಾಂಬೋರೇಟನ್ನು ಅವರಿಗೆ ಸಮರ್ಪಿಸಲಾಗಿದೆ ಎಂದು ತಿಳಿಸಿದರು. ಸ್ಕೌಟ್‌ನ ರಾಜ್ಯ ಆಯುಕ್ತರಾದ ಶ್ರೀ ಎಂ.ಎ. ಖಾಲಿದ್, ಜಾಂಬೋರೇಟ್ ಕುರಿತು ವಿವರಿಸಿದರು. ರಾಜ್ಯಪಾಲರ ಸ್ಫೂರ್ತಿದಾಯಕ ದೇಶಪ್ರೇಮದ ಕರೆಗೆ ಓಗೊಡುವಂತೆ ಸ್ಕೌಟ್/ಗೈಡ್/ರೋವರ್/ರೇಂಜರ್‌ಗಳು "ಜಯ್ ಹೋ" ದೇಶಭಕ್ತಿ ಗೀತೆಗೆ ಹೆಜ್ಜೆ ಹಾಕುತ್ತಾ ರಾಷ್ಟ್ರಧ್ವಜ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಧ್ವಜವನ್ನು ಹೆಮ್ಮೆಯಿಂದ ಎತ್ತಿ ಹಿಡಿದು ಸಭಾಂಗಣದಲ್ಲಿ ನಲಿದಾಡಿದರು. ಗೈಡ್‌ನ ರಾಜ್ಯ ಆಯುಕ್ತರಾದ ಶ್ರೀಮತಿ ಗೀತಾ ನಟರಾಜ್ ವಂದನಾರ್ಪಣೆ ಸಲ್ಲಿಸಿದರು.

ಅಂದು ಸಂಜೆ ಎರಡು ವಿಶೇಷ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಯೋಜಿಸಲಾಗಿತ್ತು. ದಾವಣಗೆರೆಯ ನೂಪುರ ಕಲಾಸಂಸ್ಥೆ ದೇಶಪ್ರೇಮ ಕುರಿತಾದ ನೃತ್ಯ ರೂಪಕವನ್ನು ಪ್ರದರ್ಶಿಸಿದರು. ಸೈನಿಕ ವಿಧವಾ ಪತ್ನಿಯರ ಬದುಕು ಕುರಿತಂತೆ ಸಾಕ್ಷ್ಯಚಿತ್ರವನ್ನು ಪ್ರದರ್ಶಿಸಲಾಯಿತು. ಈ ಸಾಕ್ಷ್ಯಚಿತ್ರ ನಿಜಕ್ಕೂ ಮನ ಕಲಕುವಂತೆ ಇತ್ತು. ಈ ಸಾಕ್ಷ್ಯಚಿತ್ರದ ನಂತರ ಎಲ್ಲರೂ ಎದ್ದು ನಿಂತು ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ ಸೈನಿಕರ ಆತ್ಮಕ್ಕೆ ಶಾಂತಿ ಕೋರಿ ಧ್ವಜ ವಂದನೆ ಸಲ್ಲಿಸಿದರು. ರಾಜ್ಯದ ವಾರ್ತಾ ಮತ್ತು ಪ್ರಚಾರ ಇಲಾಖೆ ಏರ್ಪಡಿಸಿದ್ದ, 'ಕರ್ನಾಟಕ ದರ್ಶನ' ಕುರಿತ ಲೇಸರ್ ಪ್ರದರ್ಶನ ಏರ್ಪಡಿಸಿತ್ತು. ಈ ಕಾರ್ಯಕ್ರಮಗಳು ಮೌಲಿಕವಾಗಿದ್ದವು.

ಜಾಂಬೋರೇಟ್ ಮೈದಾನದಲ್ಲಿ ಏಳು ದಿವಸಗಳೂ ನಿರಂತರ ಚಟುವಟಿಕೆಗಳು ನಡೆಯುತ್ತಿದ್ದವು. ಜಾಂಬೋರೇಟ್‌ನಲ್ಲಿ ಭಾಗವಹಿಸಿದ್ದ ಪ್ರತಿಯೊಬ್ಬರು ಒಂದಲ್ಲ ಒಂದು ಚಟುವಟಿಕೆಯಲ್ಲಿ ಸದಾ ತೊಡಗಿಸಿಕೊಂಡಿರುವಂತೆ ಈ ಕೆಳಗಿನ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು.

| | |
|---|---|
| * ದೈಹಿಕ ವ್ಯಾಯಾಮ | * ವಿನೋದ ಆಟಗಳು |
| * ಬ್ಯಾಂಡ್ ಗೋಷ್ಠಿ | * ಯುವ ಧ್ವನಿ |
| * ಪಥಚಲನ | * ಚುಟುಕು ಪ್ರಹಸನ |
| * ಪ್ರತಿಭಾ ಪ್ರದರ್ಶನ | * ಹೊರಸಂಚಾರ |
| * ಮೂರು ಕಾಲಿನ ಓಟ | * ಸಾಂಸ್ಕೃತಿಕ ಪ್ರದರ್ಶನ |
| * ಕವಾಯಿತು | * ರಸಪ್ರಶ್ನೆ |
| * ಜಿಲ್ಲಾ ದರ್ಶನ | * ಸಾಹಸಮಯ ಚಟುವಟಿಕೆಗಳು |
| * ಸಮುದಾಯ ಅಭಿವೃದ್ಧಿ ಚಟುವಟಿಕೆ | * ಸ್ಕಿಲ್-ಓ-ರಮ |
| * ಧ್ವಜಾರೋಹಣ | * ಗೋಣಿಚೀಲದ ಓಟ |

ಈ ಸಮಾವೇಶದ ಎಲ್ಲಾ ಸಾಂಸ್ಕೃತಿಕ ಮತ್ತು ಪಠ್ಯೇತರ ಚಟುವಟಿಕೆಗಳನ್ನು ಸಮಾವೇಶದಲ್ಲಿ ಭಾಗವಹಿಸಿದ ವಿದ್ಯಾರ್ಥಿ ಸಮುದಾಯಕ್ಕೆ ಉತ್ಸಾಹದಾಯಕವಾಗಿರುವಂತೆ ಸಂಯೋಜಿಸಲಾಗಿತ್ತು. ವಿದ್ಯಾರ್ಥಿಗಳು ಕೌಶಲ್ಯಗಳನ್ನು ಪ್ರದರ್ಶಿಸಿ ಪ್ರತಿಭೆಗಳನ್ನು ಪರಸ್ಪರ ಹಂಚಿಕೊಂಡರು. ಪ್ರತಿದಿನ ಸಂಜೆ ಉಪಶಿಬಿರಗಳಲ್ಲಿ ಶಿಬಿರಾಗ್ನಿ ಚಟುವಟಿಕೆಗಳು ನಡೆದವು. ಶ್ರೀಮತಿ ಎಸ್.ಕೆ. ಪ್ರಭಾ ಎಲ್.ಟಿ.(ಗೈ) ಹಾಗೂ ರಾಜ್ಯ ಜಂಟಿ ಕಾರ್ಯದರ್ಶಿ (ಗೈ) ಇವರು ಕಾರ್ಯಚಟುವಟಿಕೆಗಳ ಸಂಚಾಲಕರಾಗಿದ್ದರು. ರಾಜ್ಯ ಸಂಘಟನಾ ಆಯುಕ್ತರಾದ ಶ್ರೀಮತಿ ಕೆ.ವಿ. ಶಾಮಲಾರವರು ಜಾಂಬೋರೇಟ್ ಕಾರ್ಯಕ್ರಮಗಳ ಸಂಘಟನೆ ಮಾಡಿದರು.

**ವಿಶ್ವಪರ್ಯಟನೆ:** ಈ ಕಾರ್ಯಕ್ರಮವನ್ನು ಪ್ರಪ್ರಥಮವಾಗಿ ಸ್ಕೌಟ್-ಗೈಡ್, ರೋವರ್-ರೇಂಜರ್‌ಗಳಿಗೆ ವಿಶ್ವದ ವಿವಿಧ ದೇಶಗಳ ಸ್ಕೌಟ್-ಗೈಡ್ ಸಂಸ್ಥೆಗಳ ಮತ್ತು ಸಂಸ್ಕೃತಿಯ ಪರಿಚಯ ಮಾಡಿಕೊಡಲು ರಚಿಸಲಾಗಿತ್ತು. ಈ ಕಾರ್ಯಕ್ರಮ ಅತ್ಯಂತ ಯಶಸ್ವಿಯಾಗಿ ಜರುಗಿತು. ರಾಜ್ಯ ಸಂಸ್ಥೆ ಪ್ರಕಟಣೆಗಳ

ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಅವರು ಸಮಾರಂಭದ ಮುಖ್ಯ ಅತಿಥಿಯಾಗಿ ವಿಶ್ವಪರ್ಯಟನೆ ಕಾರ್ಯಕ್ರಮ ಉದ್ಘಾಟಿಸಿದರು. ಕೇಂದ್ರ ಸರ್ಕಾರದ ಸಚಿವರಾದ ಮಾನ್ಯಶ್ರೀ ಜಿ.ಎಂ. ಸಿದ್ದೇಶ್‌ರವರು ಕಾರ್ಯಕ್ರಮದಲ್ಲಿ ಭಾಗವಹಿಸಿ ಶುಭಕೋರಿದರು. ಈ ಚಟುವಟಿಕೆಯನ್ನು ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈ)ರವರು ಆಯೋಜಿಸಿದ್ದರು. ಮಾನ್ಯ ವಿಧಾನ ಸಭಾಧ್ಯಕ್ಷರಾದ ಶ್ರೀ ಕಾಗೋಡು ತಿಮ್ಮಪ್ಪನವರು ಜಾಂಬೋರೇಟ್‌ಗೆ ಭೇಟಿ ನೀಡಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಚಟುವಟಿಕೆಯನ್ನು ವೀಕ್ಷಣೆ ಮಾಡಿದರು.

ದಿನಾಂಕ 19.01.2015ರಂದು ನಡೆದ ಪಥಚಲನವು ಶ್ರೀ ಕೋನಪ್ಪ ರೆಡ್ಡಿ, ಡಿ.ವೈ.ಎಸ್.ಪಿ. ದೊಡ್ಡಬಳ್ಳಾಪುರ ಉಪವಿಭಾಗ, ಅವರಿಂದ ಉದ್ಘಾಟಿತವಾಯಿತು. ಆಕರ್ಷಣೀಯವಾದ ಪಥಚಲನವು ಸ್ಕೌಟ್ಸ್/ಗೈಡ್ಸ್‌ಗಳ ಘೋಷಣೆಗಳಿಂದ ಹಾಗೂ ಘೋಷಣಾ ಫಲಕಗಳಿಂದ ದೊಡ್ಡಬಳ್ಳಾಪುರದ ನಾಗರಿಕರಲ್ಲಿ ಉತ್ಸಾಹವನ್ನು ಮೂಡಿಸಿತು.

ಮಧ್ಯಾಹ್ನ ಸಾಹಸ ಕ್ರೀಡೆಗಳನ್ನು ಉದ್ಘಾಟಿಸಿ ಅವುಗಳಿಂದ ಉತ್ತೇಜಿತರಾದ ಗೃಹಸಚಿವರಾದ ಮಾನ್ಯ ಶ್ರೀ ಕೆ.ಜೆ. ಜಾರ್ಜ್ ಹಾಗೂ ದೊಡ್ಡಬಳ್ಳಾಪುರ ಮಾನ್ಯ ಶಾಸಕರಾದ ಶ್ರೀ ಟಿ. ವೆಂಕಟರಮಣಯ್ಯ ಅವರುಗಳು ಸಾಹಸ ಕ್ರೀಡೆಗಳಲ್ಲಿ ಪಾಲ್ಗೊಂಡಿದ್ದು ವಿಶೇಷವಾಗಿತ್ತು.

ದಿನಾಂಕ 20.01.2015ರಂದು ಜಾಂಬೋರೇಟ್‌ನಲ್ಲಿ ಏರ್ಪಡಿಸಿದ್ದ ಹಮ್ಮಿಕೊಂಡ ಹಿಮಾಲಯ ವೃಕ್ಷಮಣಿಧಾರಕರ ಸಭೆಯನ್ನು ಶ್ರೀ ಅನಲೇಂದ್ರ ಶರ್ಮ, ಪ್ರಾದೇಶಿಕ ಸಂಘಟನಾ ಆಯುಕ್ತರು (ಸ್ಕೌ) ಅವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು ಹಾಗೂ ಪ್ರತಿ ಜಿಲ್ಲೆಯ ಅತ್ಯುತ್ತಮ ದಳನಾಯಕ ಮತ್ತು ನಾಯಕಿಯರನ್ನು ಗುರುತಿಸಿ ಸನ್ಮಾನಿಸಲಾಯಿತು.

ಜಾಂಬೋರೇಟ್ ಸಮಾವೇಶದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ವಿಧಾನ ಪರಿಷತ್ ಸದಸ್ಯರಾದ ಮಾನ್ಯಶ್ರೀ ಬಸವರಾಜ್ ಹೊರಟ್ಟಿ ಮತ್ತು ಶ್ರೀಮತಿ ರಾಣಿ ಸತೀಶ್, ಅಧ್ಯಕ್ಷರು, ಹಟ್ಟಿ ಗೋಲ್ಡ್ ಮೈನ್ಸ್, ಶ್ರೀ ಆರ್. ಚೌಡರೆಡ್ಡಿ, ಎಂ.ಎಲ್.ಸಿ. ಹಾಗೂ ಖ್ಯಾತ ಚಲನಚಿತ್ರ ನಟರಾದ ಶ್ರೀ ಕಿಚ್ಚ ಸುದೀಪ್‌ರವರು ಭಾಗವಹಿಸಿ ಮಕ್ಕಳಿಗೆ ಹಾಡು ಹೇಳುವುದರ ಮುಖಾಂತರ ರಂಜಿಸಿದರು.

ಉನ್ನತ ಶಿಕ್ಷಣ ಸಚಿವರಾದ ಶ್ರೀ ಆರ್.ವಿ. ದೇಶಪಾಂಡೆ ಅವರು "ಕರ್ನಾಟಕ ದರ್ಶನ" ಕಾರ್ಯಕ್ರಮವನ್ನು ಸ್ಕೌಟ್ ಮತ್ತು ಗೈಡ್ ವಿದ್ಯಾರ್ಥಿಗಳಿಗೂ ವಿಸ್ತರಿಸುವುದಾಗಿ ಭರವಸೆ ನೀಡಿದರು. ಈ ಹಿನ್ನೆಲೆಯಲ್ಲಿ ಈಗಾಗಲೇ 3500 ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಿಗೆ "ಕರ್ನಾಟಕ ದರ್ಶನ" ಕಾರ್ಯಕ್ರಮದಲ್ಲಿ ಭಾಗಿಯಾಗುವ ಅವಕಾಶ ನೀಡಲಾಗುವುದೆಂದು ಹೇಳಿದರು. ಇದಕ್ಕಾಗಿ ನಾವು ಉನ್ನತ ಶಿಕ್ಷಣ ಸಚಿವರಿಗೆ ಆಭಾರಿಯಾಗಿದ್ದೇನೆ.

ಕಾರ್ಯಕ್ರಮಗಳಿಗಾಗಿ ಸುಂದರವಾದ ಬೃಹತ್ ವೇದಿಕೆಯನ್ನು ನಿರ್ಮಿಸಲಾಗಿತ್ತು. ಏಳು ದಿನಗಳವರೆಗೆ ನಡೆದ ಸಮಾವೇಶದಲ್ಲಿ ಸ್ಕೌಟ್/ಗೈಡ್/ರೋವರ್/ರೇಂಜರ್ ವಿದ್ಯಾರ್ಥಿಗಳು ಜಾಂಬೋರೇಟ್ ಉತ್ಸವ ಸಂತೋಷಕೂಟದಲ್ಲಿ ಸಂಭ್ರಮದಿಂದ ಭಾಗವಹಿಸಿದ್ದರು. 22.01.2015ರಂದು ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ರಾಜ್ಯ ಸಚಿವರಾದ ಮಾನ್ಯಶ್ರೀ ಕಿಮ್ಮನೆ ರತ್ನಾಕರ್‌ರವರು ಮುಖ್ಯ ಅತಿಥಿಗಳಾಗಿದ್ದರು. ಶ್ರೀ ಬಿ.ಜಿ. ನಂದಕುಮಾರ್, ಭಾ.ಆ.ಸೇ. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಅವರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಜಾಂಬೋರೇಟ್ ಅತ್ಯಂತ ವೈವಿಧ್ಯಮಯವಾಗಿತ್ತು. ನಮಗರಿವಿಲ್ಲದೆಯೇ ಅಂತಿಮ ಹಂತಕ್ಕೆ ಬಂದಿತ್ತು. 22.01.2015 ರಂದು ಸಮಾರೋಪ ಸಮಾರಂಭಕ್ಕೆ ಕರ್ನಾಟಕ ರಾಜ್ಯದ ಸನ್ಮಾನ್ಯ ಮುಖ್ಯಮಂತ್ರಿಗಳು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಸಿದ್ಧರಾಮಯ್ಯ ಅವರು ಆಗಮಿಸಿ ತಮ್ಮ ಸಮಾರೋಪ ಭಾಷಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ಇನ್ನು ಹೆಚ್ಚಾಗಿ ವಿಸ್ತರಿಸಿಕೊಳ್ಳಲು ರಾಜ್ಯ ಸರ್ಕಾರ ಅಗತ್ಯ ನೆರವು ನೀಡುವುದಾಗಿ ಭರವಸೆ ನೀಡಿದರು. ಈ ಚಳವಳಿಯಲ್ಲಿ ವಿದ್ಯಾರ್ಥಿಗಳು ಸಕ್ರಿಯವಾಗಿ ಪಾಲ್ಗೊಂಡು ಪಠ್ಯದ ಜೊತೆಗೆ ಪಠ್ಯೇತರ ಶಿಕ್ಷಣವಾದ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಬೇಕೆಂದು ಕರೆಯಿತ್ತರು. ಇದೇ ಸಂದರ್ಭದಲ್ಲಿ ಜಾಂಬೋರೇಟ್‌ನ ವಿಶೇಷ ಸ್ಮರಣ ಸಂಚಿಕೆ 'ನಿಸರ್ಗ'ವನ್ನು ಲೋಕೋಪಯೋಗಿ ಸಚಿವರಾದ ಮಾನ್ಯ ಡಾ॥ ಹೆಚ್.ಸಿ. ಮಹದೇವಪ್ಪನವರು ಬಿಡುಗಡೆಗೊಳಿಸಿದರು. ಈ ಸ್ಮರಣ ಸಂಚಿಕೆಯು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಕುರಿತಂತೆ ಲೇಖನಗಳನ್ನು ಹಾಗೂ ಗಣ್ಯರ ಸಂದೇಶಗಳನ್ನು ಒಳಗೊಂಡಿದೆ. ಚಿಕ್ಕಬಳ್ಳಾಪುರದ ಸಂಸದರಾದ ಮಾನ್ಯ ಶ್ರೀ ವೀರಪ್ಪ ಮೋಯ್ಲಿಯವರು, ರಾಜ್ಯ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಸಚಿವರಾದ ಮಾನ್ಯ ಶ್ರೀ ರೋಷನ್‌ಬೇಗ್‌ರವರು, ಕೃಷಿ ಸಚಿವರಾದ ಮಾನ್ಯ ಶ್ರೀ ಕೃಷ್ಣ ಭೈರೇಗೌಡರವರು, ಮಾಜಿ ರಾಜ್ಯ ಕೋಶಾಧಿಕಾರಿ

ಶ್ರೀ ಟಿ. ಪ್ರಭಾಕರ್, ಸ್ಥಳೀಯ ಶಾಸಕರಾದ ಮಾನ್ಯ ಶ್ರೀ ಟಿ. ವೆಂಕಟರಮಣಯ್ಯ ಹಾಗೂ ಮಾಜಿ ಶಾಸಕರಾದ ಶ್ರೀ ಆರ್.ಜಿ. ವೆಂಕಟಾಚಲಯ್ಯ ಸೇರಿದಂತೆ ಸಭೆಯಲ್ಲಿ ಉಪಸ್ಥಿತರಿದ್ದ ಗಣ್ಯರೆಲ್ಲರು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿ ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳಿಗೆ ಬೆಂಬಲ ವ್ಯಕ್ತಪಡಿಸಿದರು.

ಸಂಸ್ಥೆಯ ಕೋಶಾಧಿಕಾರಿ ಶ್ರೀ ಪ್ರಭುದೇವ ಜೆ. ಚಿಗಟೇರಿ, ಸಮಾರೋಪ ಸಮಾರಂಭಕ್ಕೆ ಆಗಮಿಸಿದ ಅತಿಥಿಗಳಿಗೆ ಸ್ವಾಗತ ಕೋರಿದರು. ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಜಾಂಬೋರೇಟ್ ಸಮಾವೇಶದ ಒಂದು ಪಕ್ಷಿನೋಟವನ್ನು ಸಭೆಯ ಮುಂದಿಟ್ಟರು. ಶ್ರೀ ಆನಂದ ಅಡಿಗ, ಎಲ್.ಟಿ.(ಸ್ಕೌ) ಜಾಂಬೋರೇಟ್ ಸ್ಕೌಟ್ ವಿಭಾಗದ ನಾಯಕರು, ಶ್ರೀಮತಿ ಉಷಾ ದಾಮೋದರನ್, ಎ.ಎಲ್.ಟಿ.(ಗೈ) ಜಾಂಬೋರೇಟ್ ಗೈಡ್ ವಿಭಾಗದ ನಾಯಕಿಯರು ಜಾಂಬೋರೇಟ್ ವರದಿಯನ್ನು ಪ್ರಸ್ತುತಪಡಿಸಿದರು. ಇಬ್ಬರು ಸ್ಕೌಟ್ಸ್ ಹಾಗೂ ಇಬ್ಬರು ಗೈಡ್ಸ್ ಜಾಂಬೋರೇಟ್ ಜಾತ್ರೆಯಲ್ಲಿ ಆದ ಅನುಭವವನ್ನು ಹಂಚಿಕೊಂಡರು. ರಾಷ್ಟ್ರೀಯ ಮತ್ತು ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ವಂದನಾರ್ಪಣೆ ಸಲ್ಲಿಸಿದರು.

ದಿನಾಂಕ 23.01.2015ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯು ಯಶಸ್ವಿಯಾಗಿ ಜರುಗಿತು. ಈ ಬೇಲಿಮಠ ಮಹಾಸಂಸ್ಥಾನ, ಬೆಂಗಳೂರು, ರೆವರೆಂಡ್ ವೇದಮೂರ್ತಿ ಪಾದ್ರಿಗಳು, ದೊಡ್ಡಬಳ್ಳಾಪುರ ಚರ್ಚ್ ಮತ್ತು ಶ್ರೀ ಹೆಚ್. ಮುನಾಫ್, ಕಿಲಾ ಜಾಮಿಯಾ ಮಸೀದಿ, ದೊಡ್ಡಬಳ್ಳಾಪುರ ಅವರುಗಳು ಭಾಗವಹಿಸಿ, ಎಲ್ಲ ಧರ್ಮಗಳೂ ಶಾಂತಿತತ್ವಗಳ ಸಂದೇಶವನ್ನೇ ಸಾರುವುದೆಂದು ಹೇಳಿ ಸ್ಕೌಟ್-ಗೈಡ್ ಚಳವಳಿಗೆ ಶುಭಕೋರಿದರು.

ಈ ಜಾಂಬೋರೇಟ್ ಸಮಾವೇಶವು ಅತ್ಯುತ್ತಮ ಶುಭಾರಂಭವಾಗಿ ನಿಗದಿತ ಕಾರ್ಯಚಟುವಟಿಕೆಗಳನ್ನು ಪೂರ್ಣಗೊಳಿಸಿ ಯಶಸ್ವಿಯಾಗಿ ಉದಾತ್ತವಾದ ಧ್ಯೇಯ, ನೆಲ-ಜಲ-ರಕ್ಷಣೆ, ನಮ್ಮ ಹೊಣೆ ಭ್ರಾತೃತ್ವ ಮತ್ತು ಶಾಂತಿ ಸಂದೇಶದೊಂದಿಗೆ ಮುಕ್ತಾಯವಾಯಿತು. ಇದರೊಂದಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಸಂಸ್ಥಾಪಕ ಶ್ರೀ ಬೇಡೆನ್ ಪೋವೆಲ್‌ರ ಸದಾಶಯಗಳನ್ನು ಸಮುದಾಯದಲ್ಲಿ ಪ್ರವಾಸರ ಮಾಡುವಲ್ಲಿ ಅತ್ಯಂತ ಯಶಸ್ವಿಯಾಯಿತು.

ವಿಶೇಷವಾಗಿ ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿದ್ದಯ್ಯ, ಐ.ಎ.ಎಸ್.(ನಿವೃತ್ತ) ಕಾರ್ಯಕಾರಿಸಮಿತಿ ಸದಸ್ಯರಾದ ಶ್ರೀ ಮೋಹನ್ ಕೊಂಡಜ್ಜಿ ಅವರು ಜಾಂಬೋರೇಟ್ ಯಶಸ್ವಿಯಾಗಿ ವಹಿಸಿದ ಶ್ರಮ ಸ್ಮರಣೀಯವಾದುದು. ಸತತವಾಗಿ ಜಾಂಬೋರೇಟ್‌ನ ಯಶಸ್ವಿಗಾಗಿ ಶ್ರಮಿಸಿದ ಸರ್ಕಾರದ ಗ್ರಾಮಾಂತರ ಜಿಲ್ಲೆ ಹಾಗೂ ರಾಜ್ಯ ಮಟ್ಟದ ವಿವಿಧ ಇಲಾಖೆಗಳ ಸಹಕಾರಕ್ಕೆ, ಜಿಲ್ಲೆಗಳ ಹಾಗೂ ರಾಜ್ಯ ಸಂಸ್ಥೆಯ ಪದಾಧಿಕಾರಿಗಳಿಗೆ, ಜಾಂಬೋರೇಟ್‌ನ ವಿವಿಧ ಸಮಿತಿಗಳ ಸದಸ್ಯರುಗಳಿಗೆ, ಹಿತೈಷಿಗಳಿಗೆ, ದಾನಿಗಳಿಗೆ, ಸಂದರ್ಶಕರಿಗೆ, ಮಾಧ್ಯಮ ಮಿತ್ರರಿಗೆ ದೊಡ್ಡಬಳ್ಳಾಪುರದ ನಾಗರಿಕರಿಗೆ ಹೃನ್ಮನಃಪೂರ್ವಕವಾಗಿ ವಂದಿಸುತ್ತಾ ಅಭಿನಂದಿಸುತ್ತೇವೆ ಹಾಗೂ ವಾರ್ತಾಪತ್ರಿಕೆಯ ಶ್ರೀ ಸಂಜಯ ದೊರೆ, ಜಾಂಬೋರೇಟ್ ಸಂಯೋಜಕರಾಗಿ ಕರ್ತವ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌ) ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್ ಮತ್ತು ನಿವೃತ್ತ ರಾಜ್ಯ ಸಂಘಟನಾ ಆಯುಕ್ತರು (ಗೈ) ಇವರುಗಳಿಗೆ ಅಭಿನಂದನೆ ಸಲ್ಲಿಸುತ್ತೇವೆ.

ಇದಲ್ಲದೆ, ಎಲ್ಲಾ ರೀತಿಯ ಬೆಂಬಲ ಹಾಗೂ ಸಹಕಾರ ನೀಡಿದ ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು, ದೊಡ್ಡಬಳ್ಳಾಪುರ ನಗರ ಸಭೆ, ಬಾಶೆಟ್ಟಿಹಳ್ಳಿ ಗ್ರಾಮ ಪಂಚಾಯತ್, ದೊಡ್ಡಬಳ್ಳಾಪುರ ತಾಲ್ಲೂಕು ಪಂಚಾಯತ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್‌ನ ಅಧಿಕಾರಿಗಳು, ಸದಸ್ಯರು ಹಾಗೂ ಅಧ್ಯಕ್ಷರು, ದೊಡ್ಡಬಳ್ಳಾಪುರದ ಹಲವಾರು ಸಂಘ-ಸಂಸ್ಥೆಗಳಿಗೆ ಹಾಗೂ ಜಾಂಬೋರೇಟ್ ಯಶಸ್ಸಿಗೆ ಸಹಕರಿಸಿದ ಸರ್ವರಿಗೂ ರಾಜ್ಯ ಸಂಸ್ಥೆಯ ಹೃತ್ಪೂರ್ವಕ ಧನ್ಯವಾದಗಳು.

27ನೇ ಜಾಂಬೋರೇಟ್ ಸಂಭ್ರಮದಿಂದ ಅತ್ಯಂತ ಯಶಸ್ವಿಯಾಗಿ ನಡೆಯಲು ವಿಶೇಷವಾಗಿ ಸಹಕರಿಸಿದ ಶ್ರೀ ಟಿ. ವೆಂಕಟರಮಣಯ್ಯ, ಮಾನ್ಯ ಸ್ಥಳೀಯ ಶಾಸಕರು, ಸಾರ್ವಜನಿಕ ಶಿಕ್ಷಣ ಇಲಾಖೆ, BESCOM, BWSSB, KPTCL, BBMP, ಪೋಲೀಸ್ ಇಲಾಖೆ, ಲೋಕೋಪಯೋಗಿ ಇಲಾಖೆ ಕರ್ನಾಟಕ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಮತ್ತು ಕರ್ನಾಟಕ ಸರ್ಕಾರದ ವಿವಿಧ ಇಲಾಖೆಗಳಿಗೆ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಋಣಿಯಾಗಿರುತ್ತದೆ.



ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಭದ್ರ ಬುನಾದಿ ಹಾಕಿದ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಆಚರಣೆಗೆ ದಿನಾಂಕ 11.12.2014ರಂದು ಶಾಂತಿಗೃಹದ ಸಭಾಭವನದಲ್ಲಿ ಚಾಲನೆ ನೀಡಿದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಡಾ. ಸಾ.ಶಿ. ಮರುಳಯ್ಯನವರು ಮಾತನಾಡುತ್ತಿರುವುದು. ಮಾಜಿ ಕೇಂದ್ರ ಸಚಿವ ಶ್ರೀ ಎಂ.ವಿ. ರಾಜಶೇಖರನ್, ಡಾ. ರಮೇಶ್ ಕಾಮತ್, ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಸಂಸ್ಥೆ ಉಪಾಧ್ಯಕ್ಷರುಗಳಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಆಯುಕ್ತರುಗಳಾದ ಶ್ರೀ ಎಂ.ಎ. ಖಾಲಿದ್ ಶ್ರೀಮತಿ ಗೀತಾ ನಟರಾಜ್ ಹಾಗೂ ರಾಜ್ಯ ಕೋಶಾಧಿಕಾರಿ ಶ್ರೀ ಪ್ರಭುದೇವ ಜೆ. ಚಿಗಟೇರಿ ಹಾಗೂ ಸಹಾಯಕ ರಾಜ್ಯ ಆಯುಕ್ತ (ಸ್ಕೌಟ್ಸ್) ಶ್ರೀ ಡಿ.ವೆಂಕಟೇಶ್ ಅವರುಗಳನ್ನು ಚಿತ್ರದಲ್ಲಿ ಕಾಣಬಹುದು.



ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ವಜುಬಾಯಿ ರೂಡಾಬಾಯಿ ವಾಲಾ ಅವರು ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜರುಗಿದ 27ನೇ ರಾಜ್ಯ ಜಾಂಬೋರೇಟ್ ಸಮಾವೇಶದಲ್ಲಿ ಮಾಜಿ ಸಚಿವ ದಿವಂಗತ ಕೊಂಡಜ್ಜಿ ಬಸಪ್ಪ ಅವರ ಭಾವಚಿತ್ರಕ್ಕೆ ಪುಷ್ಪಗಳನ್ನು ಅರ್ಪಿಸುತ್ತಿರುವುದು. ದೊಡ್ಡಬಳ್ಳಾಪುರದ ಮಾನ್ಯ ಶಾಸಕರಾದ ಶ್ರೀ ಟಿ.ವೆಂಕಟರಮಣಯ್ಯ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತ ಶ್ರೀ ಮಹಮದ್ ಮೊಹಿಸಿನ್ ಅವರುಗಳು ಚಿತ್ರದಲ್ಲಿದ್ದಾರೆ.



Sri Siddaramaiah, Hon'ble Chief Minister of Karnataka & President, The Bharat Scouts & Guides Karnataka is seen with the Souvenir "Nisarga" released by Dr. H.C. Mahadevappa, Hon'ble Minister for Public Works on 22nd January 2015 at the Valedictory Programme of the Jamborette. Sri M. Veerappa Moily, Hon'ble Member of Parliament, Chikkaballapur & Former Chief Minister of Karnataka, Sri R. Roshan Baig, Hon'ble Minister for Information, Infrastructure Development and Haj, Sri Krishna Byregowda, Hon'ble Minister for Agriculture, Sri P.G.R. Sindhia, State Chief Commissioner, Sri T. Venkataramanaiah, Hon'ble MLA and Smt. Salma K. Faheem, Deputy Commissioner, Bangalore Rural District, Smt. C.P. Shailaja, CEO, Bangalore Rural ZP, Sri R.G. Venkatachalaiah, Former MLA & Chairman of BIAPA, Smt. Shantha V. Acharya, Vice President are seen.



ದಿನಾಂಕ 28.11.2015ರಂದು ದೆಹಲಿ ಕರ್ನಾಟಕ ಸಂಘದ ಸಭಾಂಗಣದಲ್ಲಿ ಜರುಗಿದ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಆಚರಣೆ ಸಮಾರಂಭವನ್ನು ಶ್ರೀ ಜಿ.ಎಂ. ಸಿದ್ದೇಶ್ವರ್, ಮಾನ್ಯ ಬೃಹತ್ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ಯಮಿಗಳ ರಾಜ್ಯ ಸಚಿವರು ಭಾರತ ಸರ್ಕಾರ, ನ್ಯಾಯಮೂರ್ತಿ ಶ್ರೀ ವಿ. ಗೋಪಾಲಗೌಡ, ಉಚ್ಚನ್ಯಾಯಾಲಯದ ಮಾನ್ಯ ನ್ಯಾಯಾಧೀಶರು ನವದೆಹಲಿ ಮತ್ತು ಶ್ರೀ ಮಲ್ಲಿಕಾರ್ಜುನ ಖರ್ಗೆ, ಲೋಕಸಭೆಯ ಕಾಂಗ್ರೆಸ್ ಪಕ್ಷದ ಮಾನ್ಯ ನಾಯಕರು ಉದ್ಘಾಟಿಸಿದರು. ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ.ಐ. ನಾಗರಾಳೆ, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌ), ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈ) ವೇದಿಕೆಯಲ್ಲಿದ್ದಾರೆ.

# ದೆಹಲಿಯಲ್ಲಿ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಕಾರ್ಯಕ್ರಮ

**ಭಾ**ರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ಆಶ್ರಯದಲ್ಲಿ ನವದೆಹಲಿಯ ಕರ್ನಾಟಕ ಸಂಘದ ಸಭಾಂಗಣದಲ್ಲಿ ದಿನಾಂಕ : 28.11.2015 ರಂದು ಸಂಜೆ ದಿವಂಗತ ಕೊಂಡಜ್ಜಿ ಬಸಪ್ಪ ಅವರ ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

"ಸ್ವಂತಕ್ಕಾಗಿ ಏನನ್ನು ಬಯಸದೇ ಸ್ಕೌಟ್ಸ್ ಮತ್ತು ಗೈಡ್ಸ್ ಮೂಲಕ ಸಮಾಜದ ಏಕತೆಗಾಗಿ ಶ್ರಮಿಸಿದ ಕೊಂಡಜ್ಜಿ ಬಸಪ್ಪನವರ ಜೀವನ ಅನುಕರಣೀಯ. ಕೇವಲ ಸಮಾಜಕ್ಕಾಗಿ ತನ್ನ ಜೀವನವನ್ನು ಮುಡಿಪಾಗಿಡುವ ಜನ ವಿರಳವಾಗುತ್ತಿದ್ದು ಇಂದಿನ ಯುವಕ ಯುವತಿಯರು ಕೊಂಡಜ್ಜಿ ಬಸಪ್ಪನವರಂತೆ ಆದರ್ಶ ಜೀವನ ನಡೆಸಬೇಕು" ಎಂದು ಸುಪ್ರೀಂ ಕೋರ್ಟ್ ನ್ಯಾಯಮೂರ್ತಿ ಶ್ರೀ.ವಿ.ಗೋಪಾಲ ಗೌಡರು ಹೇಳಿದರು.

ದೆಹಲಿ ಕರ್ನಾಟಕ ಸಂಘದಲ್ಲಿ ಏರ್ಪಡಿಸಿದ್ದ ಕೊಂಡಜ್ಜಿ ಬಸಪ್ಪನವರ ಜನ್ಮಶತಾಬ್ಧಿ ಆಚರಣೆ ಕಾರ್ಯಕ್ರಮದಲ್ಲಿ ಮುಖ್ಯ ಭಾಷಣ ಮಾಡಿದ ನ್ಯಾಯಮೂರ್ತಿ ಶ್ರೀ ಗೋಪಾಲ ಗೌಡರು, "ತನ್ನ ಮಗಳ ಮದುವೆಗಾಗಿ ಮಾಡಿದ್ದ ಖರ್ಚನ್ನು ಸರಿದೂಗಿಸಲು ಕೊಂಡಜ್ಜಿ ಬಸಪ್ಪನವರು ಕೇಂದ್ರ ಮಂತ್ರಿಯಾಗಿದ್ದಾಗಲೇ ಅವರ ಕಾರನ್ನು ಮಾರಿದ್ದರು. ಇಂಥ ರಾಜಕಾರಣಿ ಸಿಗುವುದು ಇಂದು ಅಪರೂಪ" ಎಂದು ಹಳೆಯ ನೆನಪುಗಳನ್ನು ಬಿಚ್ಚಿಟ್ಟರು.

ಕೊಂಡಜ್ಜಿ ಬಸಪ್ಪನವರ ಬಗ್ಗೆ ರಾಜ್ಯ ಸಂಸ್ಥೆ ಪ್ರಕಟಿಸಿರುವ "ಕೊಂಡಜ್ಜಿ ಬಸಪ್ಪ" ಇಂಗ್ಲೀಷ್ ಪುಸ್ತಕವನ್ನು ಬಿಡುಗಡೆ ಮಾಡಿದ ಲೋಕಸಭಾ ಸದಸ್ಯರು ಹಾಗೂ ಲೋಕಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು "1976 ರಲ್ಲಿ ನಾನು ಕರ್ನಾಟಕದ ಪ್ರಾಥಮಿಕ ಶಿಕ್ಷಣ ಮಂತ್ರಿಯಾಗಿದ್ದಾಗ ನನ್ನನ್ನು ಅರಮನೆ ರಸ್ತೆಯ ಸ್ಕೌಟ್ಸ್ ಮತ್ತು ಗೈಡ್ಸ್ ಕಚೇರಿಗೆ ಕರೆದುಕೊಂಡು ಹೋಗಿ ಗೌರವಿಸಿದರು ಹಾಗೂ ಅವರ ನಿಸ್ವಾರ್ಥ ಸಮಾಜ ಸೇವೆ ನಮಗೆಲ್ಲ ಮಾದರಿ ಇಂಥ ಜನ ಈಗ ಸಮಾಜದಲ್ಲಿ ಕಡಿಮೆಯಾಗಿದ್ದಾರೆ" ಎಂದು ತಮ್ಮ ಸವಿನೆನಪುಗಳನ್ನು ಸಭೆಯಲ್ಲಿ ಹಂಚಿಕೊಂಡರು. ಮಾಜಿ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ತಮ್ಮ ಸಂಪುಟದಲ್ಲಿದ್ದ ಕೊಂಡಜ್ಜಿ ಬಸಪ್ಪನವರ ಬಗ್ಗೆ ಅತ್ಯುತ್ತಮ ಅಭಿಪ್ರಾಯ ವ್ಯಕ್ತಪಡಿಸಿರುವುದೇ ಅವರ ವ್ಯಕ್ತಿತ್ವಕ್ಕೆ ಸಾಕ್ಷಿ ಎಂದರು.

ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮುಖ್ಯ ರಾಷ್ಟ್ರೀಯ ಆಯುಕ್ತ ಶ್ರೀ ಬಿ.ಐ. ನಾಗರಾಳೆ ಅವರು ಕೊಂಡಜ್ಜಿ ಬಸಪ್ಪ ಅವರು ಕರ್ನಾಟಕದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಮತ್ತು ಸಹಕಾರಿ ಚಳವಳಿಗೆ ಕೊಟ್ಟ ಕೊಡುಗೆಯನ್ನು ಬಣ್ಣಿಸಿ ಅವರೊಬ್ಬ ರಾಷ್ಟ್ರದ ಹೆಮ್ಮೆಯ ಪುತ್ರ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಕೇಂದ್ರ ಸಚಿವರಾದ ಶ್ರೀ ಜಿ.ಎಂ. ಸಿದ್ದೇಶ್ವರ್ ಅವರು ಕೊಂಡಜ್ಜಿ ಬಸಪ್ಪನವರಿಗೂ ತಮ್ಮ ತಂದೆಯವರಿಗೂ ಇದ್ದ ಸಂಬಂಧವನ್ನು ಮೆಲುಕು ಹಾಕಿದರಲ್ಲದೆ ಅವರೊಬ್ಬ ಆದರ್ಶ ರಾಜಕಾರಣಿ. ಅಂಥವರು ಈಗಿನ ದಿನಗಳಲ್ಲಿ ಅಪರೂಪ ಎಂದು ಹೇಳಿದರು. ಅವರು ಪ್ರತಿನಿಧಿಸಿದ ಕ್ಷೇತ್ರವನ್ನು ತಾವು ಇಂದು ಪ್ರತಿನಿದಿಸುತ್ತಿದ್ದು ನಿಜಕ್ಕೂ ನನಗೆ ಹೆಮ್ಮೆ ಎಂದರು. ಕರ್ನಾಟಕದಲ್ಲಿ ಸ್ಕೌಟ್ಸ್ ಗೈಡ್ಸ್ ಚಳವಳಿಯೊಂದಿಗೆ ಕೊಂಡಜ್ಜಿ ಬಸಪ್ಪ ಅವರು ಹೆಸರು ಚಿರಸ್ಮರಣೀಯ ಎಂದು ಬಣ್ಣಿಸಿದರು.

ಕಾರ್ಯಕ್ರಮದಲ್ಲಿ ಸ್ವಾಗತ ಭಾಷಣ ಮಾಡಿದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ.ಪಿ.ಜಿ.ಆರ್.ಸಿಂಧ್ಯ ಅವರು ಇಂದು ಕರ್ನಾಟಕದಲ್ಲಿ ಸ್ಕೌಟ್ಸ್-ಗೈಡ್ಸ್ ಆಂದೋಲನ ಬೆಳೆಯಲು ಕೊಂಡಜ್ಜಿ ಬಸಪ್ಪ ಅವರ ತ್ಯಾಗವನ್ನು ಸ್ಮರಿಸುವುದು ಕರ್ತವ್ಯ. ನಾನೊಬ್ಬ ರಾಜಕಾರಣಿಯಾಗಿ ಕೂಡ ಅವರ ವ್ಯಕ್ತಿತ್ವವನ್ನು ಸ್ಮರಿಸುತ್ತೇನೆ ಎಂದು ಹೇಳಿದರು.ಅವರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ನಾವುಗಳು ಸಾಗುವುದೇ ನಾವು ತೋರಿಸುವ ಗೌರವ ಎಂದರು.

ಕಾರ್ಯಕ್ರಮದಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ರಾಜ್ಯ ಮತ್ತು ರಾಷ್ಟ್ರೀಯ ಸಂಸ್ಥೆ, ಶ್ರೀಮತಿ.ಸರೋಜ.ವಿ.ನಾಯ್ಡು, ಉಪಾಧ್ಯಕ್ಷಿಣಿ, ರಾಜ್ಯ ಸಂಸ್ಥೆ, ರಾಜ್ಯ ಆಯುಕ್ತರುಗಳಾದ ಶ್ರೀ ಎಂ.ಎ.ಖಾಲಿದ್ ಹಾಗೂ ಶ್ರೀಮತಿ ಗೀತಾ ನಟರಾಜ್, ಜಂಟಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿ.ಎಸ್. ರೆಡ್ಡಿ, ಶ್ರೀಮತಿ ಎಸ್.ಕೆ. ಪ್ರಭಾ ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಮೋಹನ್‌ಕುಮಾರ್ ಕೊಂಡಜ್ಜಿ, ಕೇಂದ್ರ ಸ್ಥಾನಿಕ ಆಯುಕ್ತರುಗಳು, ರಾಜ್ಯ ಸಹಾಯಕ ಆಯುಕ್ತರುಗಳು, ಶ್ರೀ ಬಿ.ಆರ್. ಅನಿಲ್ ಕುಮಾರ್, ಆಜೀವ ಸದಸ್ಯರು, ರಾಷ್ಟ್ರೀಯ ಸಂಸ್ಥೆ ನಿರ್ದೇಶಕರು ಮತ್ತು ರಾಷ್ಟ್ರೀಯ ಪರಿಷತ್ತಿನ ಸದಸ್ಯರುಗಳು, ದೆಹಲಿ ಕರ್ನಾಟಕ ಸಂಘದ ಪದಾಧಿಕಾರಿಗಳು, ದೆಹಲಿಯ ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಮತ್ತು ರಾಜ್ಯ ಪದಾಧಿಕಾರಿಗಳು ಉಪಸ್ಥಿತರಿದ್ದರು, ಶ್ರೀಮತಿ ಪಿ. ಸರೋಜ. ಸಂಚಾಲಕರು, ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಸಮಿತಿ, ಇವರು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

ಭಾವಶುದ್ಧ ಕಾಯಕದಲ್ಲಿ ಜೀವನ ಸೌಂದರ್ಯವನ್ನು ಕಂಡ ಕರ್ಮಯೋಗಿ ಶ್ರೀ ಕೊಂಡಜ್ಜಿ ಬಸಪ್ಪ. ಹಳ್ಳಿಯ ಬಳ್ಳಿಯಲ್ಲಿ ಅರಳಿದ ಈ ಹೂ, ಇಷ್ಟು ಕಂಪು ಬೀರುವುದೆಂಬ ಕಲ್ಪನೆ ಬಹುಶಃ ಹೆತ್ತವರಿಗೂ ಇದ್ದಿರಲಾರದು.

ಹುಟ್ಟಿದ ಊರು ಚಿತ್ರದುರ್ಗ ಜಿಲ್ಲೆಯ ಹರಿಹರ ತಾಲ್ಲೂಕು ಕೊಂಡಜ್ಜಿ. ಜನ್ಮಕೊಟ್ಟ ಪುಣ್ಯ ಜೀವಿಗಳು ಶ್ರೀ ನಿಂಗಪ್ಪ ಮತ್ತು ಶ್ರೀಮತಿ ಹಾಲಮ್ಮ. ಕೈ ಹಿಡಿದ ಧರ್ಮಪತ್ನಿ ಸರ್ವಮಂಗಳಮ್ಮ. ಶ್ರೀ ಕೊಂಡಜ್ಜಿ ಬಸಪ್ಪನವರು ತುಂಬು ಕುಟುಂಬಿ. ಅವರಿಗೆ ಅಪಾರ ಬಂಧು–ಬಳಗ.

ಕೊಂಡಜ್ಜಿ – ಡಿಲ್ಲಿಗೆ ಹೋದರೂ ಹಳ್ಳಿಯನ್ನು ಮರೆಯದ ಗ್ರಾಮೀಣ ಬಂಧು ಶ್ರೀ ಕೊಂಡಜ್ಜಿ ಬಸಪ್ಪನವರು 'ಕೊಂಡಜ್ಜಿ' ಎಂದೇ ಜನಪ್ರಿಯ. ಹುಟ್ಟಿದ ಹಳ್ಳಿಗೆ ಅವರು ಸಲ್ಲಿಸಿರುವ ಋಣ ಹೃತ್ಪೂರ್ವಕವಾದುದು. ಇಂದು ಕೊಂಡದ್ದಿ ಗ್ರಾಮ ಬಹುತೇಕ ಆಧುನಿಕ ಸೌಲಭ್ಯಗಳನ್ನೆಲ್ಲ ಪಡೆದುಕೊಂಡಿದೆ. ಕೊಂಡಜ್ಜಿ ಗ್ರಾಮದೊಡನೆ ಬಸಪ್ಪನವರ ಸಂಬಂಧ ಅವಿಭಾಜ್ಯ.

ಕೊಂಡಜ್ಜಿ ಅವರ ಅಕ್ಷರಾಭ್ಯಾಸ ಹುಟ್ಟೂರಿನಲ್ಲೇ ಆರಂಭವಾಯಿತು. ಮಲೇಬೆನ್ನೂರಿನಲ್ಲಿ ಮಾಧ್ಯಮಿಕ ಶಾಲೆ, ದಾವಣಗೆರೆಯಲ್ಲಿ ಪ್ರೌಢಶಾಲೆ. ಕಾಲೇಜು ಕಲಿತುದು ಬೆಂಗಳೂರಿನಲ್ಲಿ. ಕಾನೂನು ಪದವಿ ಗಳಿಸಿದುದು ಪೂನಾದಲ್ಲಿ. ವಿದ್ಯಾರ್ಥಿ ಜೀವನದುದ್ದಕ್ಕೂ ಶ್ರೀ ಕೊಂಡಜ್ಜಿ ಶಿಸ್ತು–ಸಭ್ಯತೆಗಳಿಗೆ ಉದಾಹರಣೆ. ಸ್ವಯಂಸೇವೆಯ ಸ್ಫೂರ್ತಿ ಅವರಿಗೆ ದೈವದತ್ತ. ಸ್ನೇಹಪರತೆ ಹುಟ್ಟಿನೊಂದಿಗೇ ಬೆಳೆದು ಬಂದ ಸಹಜ ಗುಣ.

ಸ್ಮರಣೀಯ ಸೇವೆ – 1942ರಲ್ಲಿ ದಾವಣಗೆರೆಯಲ್ಲಿ ಅವರು ಆರಂಭಿಸಿದ ವಕೀಲಿ ವೃತ್ತಿಯೊಂದಿಗೆ ಅವರ ಸಾರ್ವಜನಿಕ ಜೀವನವೂ ಆರಂಭವಾಯಿತು. ಅನತಿ ಕಾಲದಲ್ಲೇ ಶ್ರೀ ಕೊಂಡಜ್ಜಿ ಅವರು ಹತ್ತು ಜನಕ್ಕೆ ಬೇಕಾದರು. 1944ರಲ್ಲಿ ಅವರು ಚಿತ್ರದುರ್ಗ ಜಿಲ್ಲಾ ಬೋರ್ಡ್ ಅಧ್ಯಕ್ಷರಾದರು. ಬಹುಶಃ ಆಗ ಅವರೇ ಅತ್ಯಂತ ಚಿಕ್ಕವಯಸ್ಸಿನ ಜಿಲ್ಲಾ ಬೋರ್ಡ್ ಅಧ್ಯಕ್ಷರೆಂದು ಕಾಣುತ್ತದೆ. ಮೂರು ವರ್ಷ ಅಧ್ಯಕ್ಷರಾಗಿ ಮುಂದೆ ಆರು ವರ್ಷ ಸದಸ್ಯರಾಗಿ ಸೇವೆ ಸಲ್ಲಿಸಿದರು. ಆ ಅವಧಿಯಲ್ಲಿ ಇಡೀ ಜಿಲ್ಲೆಯ ಪರಿಚಯ ಅವರಿಗಾಯಿತು. ಗ್ರಾಮಾಂತರದ ಸಮಸ್ಯೆಗಳ ಅರಿವೂ ಆಯಿತು. ಈ ಹಿನ್ನೆಲೆ ಮುಂದಿನ ಅವರ ಜೀವನಕ್ಕೆ ಬಹುಮಟ್ಟಿಗೆ ಆಧಾರವಾಯಿತು.

ಮೈಸೂರು ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸದಸ್ಯರಾಗಿ ಕೃಷಿ ವಿಜ್ಞಾನ ವಿಶ್ವವಿದ್ಯಾನಿಲಯದ ಆಡಳಿತ ಪ್ರತಿನಿಧಿಯಾಗಿ, ಸೆಕೆಂಡರಿ ಶಿಕ್ಷಣ ಮಂಡಳಿ ಸದಸ್ಯರಾಗಿ ಸೇವೆ ಸಲ್ಲಿಸಿರುವ ಶ್ರೀ ಕೊಂಡಜ್ಜಿ ಅವರು ಗ್ರಾಮಾಂತರ ಶಿಕ್ಷಣ ಪ್ರಸಾರಕ್ಕೆ ವಹಿಸಿರುವ ಆಸಕ್ತಿ ಅಪಾರ. ಚಿತ್ರದುರ್ಗ ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿ ಕಾರ್ಯದರ್ಶಿಯಾಗಿ, ಚಿತ್ರದುರ್ಗದಲ್ಲಿರುವ ಲಂಬಾಣಿ ವಿದ್ಯಾರ್ಥಿ ನಿಲಯದ ಅಧ್ಯಕ್ಷರಾಗಿ, ದಾವಣಗೆರೆಯಲ್ಲಿರುವ ಚಲವಾದಿ ವಿದ್ಯಾರ್ಥಿ ನಿಲಯದ ಸಂಸ್ಥಾಪಕ ಕಾರ್ಯದರ್ಶಿಯಾಗಿ, ಸಾಧು ವೀರಶೈವ ವಿದ್ಯಾರ್ಥಿ ನಿಲಯದ ಮತ್ತು ಸಿರಿಗೆರೆ ಪ್ರೌಢಶಾಲೆ ಸಂಸ್ಥಾಪಕ ಕಾರ್ಯದರ್ಶಿಯಾಗಿ, ತರಳುಬಾಳು ನಿಧಿ ಸಮಿತಿಯ ಸಂಸ್ಥಾಪಕ ಅಧ್ಯಕ್ಷರಾಗಿ ಶ್ರೀ ಕೊಂಡಜ್ಜಿ ಅವರು ಸಲ್ಲಿಸಿರುವ ಸೇವೆ ಸ್ಮರಣೀಯ.

ಕಾಯಕಶೀಲ – ಗ್ರಾಮಾಂತರ ಜನತೆಯ ಸೇವೆಯೆಂದರೆ ಶ್ರೀ ಕೊಂಡಜ್ಜಿ ಅವರಿಗೆ ಅತ್ಯಂತ ಆಸಕ್ತಿಯ ವಿಷಯ. ಕೃಷಿಕರ ಅನುಕೂಲಕ್ಕಾಗಿ 1950ರಲ್ಲಿ ಅವರು ದಾವಣಗೆರೆಯಲ್ಲಿ ಸ್ಥಾಪಿಸಿದ ಕೃಷಿಕರ ಸಂಸ್ಕರಣ ಕೈಗಾರಿಕಾ ಮತ್ತು ವಾಣಿಜ್ಯ ಸಹಕಾರ ಸಂಸ್ಥೆ ಇಂದು ಬೃಹತ್ತಾಗಿ ಬೆಳೆದು ನಿಂತಿದೆ. ದಾವಣಗೆರೆ ಮತ್ತು ಚಿತ್ರದುರ್ಗ ಭೂ ಅಭಿವೃದ್ಧಿ ಬ್ಯಾಂಕ್ ಅಧ್ಯಕ್ಷರಾಗಿ, ಕೇಂದ್ರ ಭೂ ಅಭಿವೃದ್ಧಿ ಬ್ಯಾಂಕ್ ಸದಸ್ಯರಾಗಿ ಅವರು ರೈತರ ಹಿತ ಸಂರಕ್ಷಿಸಿದ್ದಾರೆ.

ಶ್ರೀ ಕೊಂಡಜ್ಜಿ ಅವರು ರಾಜಕೀಯ ಕ್ಷೇತ್ರದಲ್ಲಿದ್ದರೂ ಸಾಮಾಜಿಕ ಸೇವಾಕರ್ತರಾಗಿ ಅವರ ವ್ಯಕ್ತಿತ್ವದ ಘನತೆಯಿದೆ. ದೀನ ದಲಿತರ ಬಗ್ಗೆ ಅವರದು ಅನುಕಂಪದ ಕರುಳು. ನೊಂದವರಿಗೆ ನೆರವಾಗಲು ಹಿಂದೆ ಮುಂದೆ ನೋಡದ ಸೇವಾ ಮನೋಭಾವ, ಕೊಂಡಜ್ಜಿ ಅವರ ಸೇವಾ ನಿಷ್ಠೆಯ ಪರಿಚಯವಾಗಬೇಕಾದರೆ ಅವರ ಸಾರ್ವಜನಿಕ ಜೀವನವೇ ಸರಿ. ಹತ್ತು ಜನಕ್ಕಾಗಿ ಈ ಬದುಕು ಮೀಸಲು ಎಂದು ದುಡಿಯುವ, ದುಡಿಯುತ್ತಿರುವ ಕಾರ್ಯಶೀಲ ಶ್ರೀ ಕೊಂಡಜ್ಜಿ.

ಸೇವೆಗೆ ಮತ್ತೊಂದು ಹೆಸರಿನಂತಿರುವ ಸ್ಕೌಟ್ ಚಳವಳಿಗೆ ಶ್ರೀ ಕೊಂಡಜ್ಜಿ ಅವರು ಪ್ರವೇಶಿಸಿದ್ದು ಅತ್ಯಂತ ಸಹಜ. ವಿದ್ಯಾರ್ಥಿ ದೆಸೆಯಲ್ಲೇ ಮಾನವೀಯ ಮೌಲ್ಯಗಳ ಬಗ್ಗೆ ಸ್ಪಷ್ಟ ಕಲ್ಪನೆ ಮೂಡಿಸಿಕೊಂಡಿದ್ದ ಶ್ರೀ ಕೊಂಡಜ್ಜಿ ಅವರ ಸೇವಾಸಕ್ತಿ ಸಹಜವಾಗಿಯೇ ಸ್ಕೌಟ್ ಚಳುವಳಿಯತ್ತ ತಿರುಗಿತು. 1941ರಿಂದಲೂ ಸ್ಕೌಟ್ ಚಳುವಳಿಯೊಂದಿಗೆ ನಿರಂತರವಾದ ಸಂಬಂಧವಿಟ್ಟುಕೊಂಡಿರುವ ಅವರು ಆ ಚಳವಳಿಯೊಂದಿಗೆ ಬೆರೆತು ಹೋಗಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಸಹಾಯಕ ಜಿಲ್ಲಾ ಕಮೀಷನರ್ ಆಗಿ, ಜಿಲ್ಲಾ ಕಮೀಷನರ್ ಆಗಿ ಸೇವೆ ಸಲ್ಲಿಸಿರುವ ಶ್ರೀ ಕೊಂಡಜ್ಜಿ, ಈಗ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪ್ರಧಾನ ಕಮೀಷನರು, ಸ್ಕೌಟ್ ಚಳುವಳಿಗೆ ಅವರಿಂದ ಸಂದಿರುವ ವಿಶಿಷ್ಟ ಸೇವೆಗಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಕೇಂದ್ರವು ಅತ್ಯುನ್ನತ ಸ್ಕೌಟ್ಸ್–ಗೈಡ್ಸ್ ಪದಕವಾದ 'ಬೆಳ್ಳಿ ಆನೆ' ನೀಡಿ ಗೌರವಿಸಿದೆ.

ವಿದೇಶ ದರ್ಶನ – 1951ರಲ್ಲಿ ಆಸ್ಟ್ರಿಯಾದಲ್ಲೂ, 1973ರಲ್ಲಿ ನೈರೋಬಿಯಲ್ಲೂ ನಡೆದ ವಿಶ್ವ ಸ್ಕೌಟ್ ಸಮ್ಮೇಳನಗಳಲ್ಲಿ ಭಾರತವನ್ನು ಪ್ರತಿನಿಧಿಸಿದ್ದ ಶ್ರೀ ಕೊಂಡಜ್ಜಿ ಅವರು ಇಟಲಿ, ಫ್ರಾನ್ಸ್, ಹಾಲೆಂಡ್, ಡೆನ್ಮಾರ್ಕ್ ಸ್ವಿಡ್ಜರ್ಲೆಂಡ್, ಇಂಗ್ಲೆಂಡ್, ಸಿಲೋನ್, ಜರ್ಮನಿ, ಮಣಿಲಾ, (ಫಿಲಿಫೈನ್ಸ್) ಮೊದಲಾಗಿ ವಿಶ್ವದ ಅನೇಕ ರಾಷ್ಟ್ರಗಳಿಗೆ ಭೇಟಿ ನೀಡಿದ್ದಾರೆ. ಎಲ್ಲಿಗೆ ಹೋಗಿ ಬಂದರೂ ಅವರಿಗೆ ತಮ್ಮ ಕೊಂಡಜ್ಜಿ ಗ್ರಾಮ ನೋಡಿದಾಗಲೇ ಸಮಾಧಾನ!

ಸಾರ್ವಜನಿಕ ಕ್ಷೇತ್ರದಲ್ಲಿ ಜನಪ್ರಿಯತೆ ಗಳಿಸಿರುವ ಶ್ರೀ ಕೊಂಡಜ್ಜಿ ರಾಜಕೀಯ ಕ್ಷೇತ್ರದಲ್ಲೂ ಹತ್ತು ಜನಕ್ಕೆ ಬೇಕಾದವರು. 1962ರಲ್ಲಿ ರಾಜ್ಯ ವಿಧಾನ ಸಭೆಗೆ ಆಯ್ಕೆಯಾಗಿ ಉಪಮಂತ್ರಿಯಾಗಿ ಸೇವೆ ಸಲ್ಲಿಸಿದ್ದಾರೆ. 1971ರಲ್ಲಿ ಲೋಕಸಭೆಗೆ ಪ್ರಚಂಡ ಬಹುಮತದಿಂದ ಆಯ್ಕೆಯಾಗಿ ಕೇಂದ್ರ ಉಪಮಂತ್ರಿಗಳಾಗಿ ಹೊಣೆ ನಿರ್ವಹಿಸಿದ್ದಾರೆ.

ಕರ್ನಾಟಕ ಕೈಮಗ್ಗ ಸಲಹಾ ಸಮಿತಿ, ಉಗ್ರಾಣ ಮಂಡಲಿ, ಕುರಿ ಮತ್ತು ಉಣ್ಣೆ ಅಭಿವೃದ್ಧಿ ಸಮಿತಿ, ಪಂಚಾಯತಿ ರಾಜ್ಯ ಸಮಿತಿ, ಭಾರತ ಸೇವಕ ಸಮಾಜ ಇವುಗಳ ಅಧ್ಯಕ್ಷರಾಗಿ ಶ್ರೀ ಕೊಂಡಜ್ಜಿ ಸಲ್ಲಿಸಿರುವ ಸೇವೆ ನೆನಪಿಲ್ಲಿಡುವಂತಹುದು.

ಶ್ರೀ ಕೊಂಡಜ್ಜಿ ಅವರಿಗೆ ಅರವತ್ತು ದಾಟಿದರೂ ಅವರ ಉತ್ಸಾಹ ಅದಮ್ಯ ದುಡಿಮೆಯ ಕೆಚ್ಚು ಇನ್ನೂ ಅಚ್ಚ ಹಸಿರು. ಅವರಿನ್ನೂ ಯುವಕರಲ್ಲಿ ಯುವಕರು, ಅವರಲ್ಲಿ ನಾವು ಕಾಣುವ ಒಂದು ವಿಶಿಷ್ಟ ಲಕ್ಷಣವೆಂದರೆ ಸಮಚಿತ್ತತೆ; ಪ್ರಶಾಂತತೆ! ಸಾರ್ವಜನಿಕ ಕ್ಷೇತ್ರದ ಪ್ರತಿಯೊಬ್ಬರಿಗೂ ಈ ಲಕ್ಷಣ ಅಪೇಕ್ಷಣೀಯ. ಇಷ್ಟಾದರೂ ಶ್ರೀ ಕೊಂಡಜ್ಜಿ ಹೆಸರು ಬಯಸದ ನಿರಾಡಂಬರ ಜೀವಿ. ಅವರಿಗೆ ಕರ್ನಾಟಕ ಜನತೆಯ ಹೃತ್ಪೂರ್ವಕ ಶುಭಾಶಯಗಳು!

ಪ್ರಕಟಣೆ : ಬೆಂಗಳೂರಿನಲ್ಲಿ ದಿನಾಂಕ 16–2–1976ರಂದು ಬೆಂಗಳೂರು ಲಾಲ್‌ಬಾಗ್‌ನ ಗಾಜಿನಮನೆಯಲ್ಲಿ ಏರ್ಪಡಿಸಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರ ಅರವತ್ತೊಂದನೆಯ ಜನ್ಮದಿನೋತ್ಸವ ಸಂದರ್ಭ.

# ಲಾರ್ಡ್ ಬೇಡನ್ ಪೊವೆಲ್‌ರ ಅಂತಿಮ ಸಂದೇಶ

ಆತ್ಮೀಯ ಸ್ಕೌಟ್ ಗೈಡ್ ಬಂಧುಗಳೇ,



ನೀವು ಯಾವಾಗಲಾದರೂ 'ಪೀಟರ್ ಪ್ಯಾನ್' ನಾಟಕ ನೋಡಿದ್ದರೆ, ಅದರಲ್ಲಿ ಕಡಲುಗಳ್ಳರ ಮುಖ್ಯಸ್ಥ ಯಾವಾಗಲೂ ತನ್ನ ಅಂತಿಮ ದಿನಗಳ ಭಾಷಣವನ್ನು ಹೇಗೆ ಮಾಡುತ್ತಿದ್ದ ಎನ್ನುವುದನ್ನು ಜ್ಞಾಪಿಸಿಕೊಳ್ಳುತ್ತೀರಿ. ಅವನು ಏಕೆ ಹಾಗೆ ಮಾತನಾಡುತ್ತಿದ್ದನೆಂದರೆ, ಒಂದು ವೇಳೆ ತಾನು ಸಾಯುವ ಕಾಲ ಬಂದಾಗ ಅದರಿಂದ ತಪ್ಪಿಸಿಕೊಳ್ಳಲು ತನಗೆ ಸಮಯಾವಕಾಶ ಇರುವುದಿಲ್ಲವೆಂದು ಅವನು ಹೆದರಿದ್ದ. ನನ್ನ ಸ್ಥಿತಿಯೂ ಅದೇ ಆಗಿದೆ. ನಾನು ತಕ್ಷಣದಲ್ಲಿ ಸಾಯುತ್ತಿಲ್ಲವಾದರೂ ಎಂದಾದರೊಂದು ದಿನ ಸಾಯಲೇಬೇಕಲ್ಲ. ಅಂತೇ ನಿಮಗೆ ಕೊನೆಯ ನಮಸ್ಕಾರದ ನುಡಿಗಳನ್ನು ಹೇಳಬೇಕೆಂದಿದ್ದೇನೆ. ನೆನಪಿರಲಿ. ಇದೇ ಕೊನೆ. ಮತ್ತೆಂದೂ ನೀವು ನನ್ನನ್ನು ಕೇಳಲಾರಿರಿ. ಆದ್ದರಿಂದ ವಿಚಾರಮಾಡಿ. ನಾನು ಅತ್ಯಂತ ನೆಮ್ಮದಿಯ ಜೀವನವನ್ನು ನಡೆಸಿದೆ. ಹಾಗೆಯೇ ನಿಮ್ಮಲ್ಲಿ ಪ್ರತಿಯೊಬ್ಬರೂ ನನ್ನಂತೆ ನೆಮ್ಮದಿಯ ಜೀವನವನ್ನು ಅನುಭವಿಸುವಂತಾಗಬೇಕೆಂದು ನಾನು ಇಚ್ಛಿಸುತ್ತೇನೆ. ನಾವು ಸುಖವಾಗಿದ್ದುಕೊಂಡು ಬದುಕನ್ನು ಪೂರ್ಣವಾಗಿ ಅನುಭವಿಸಬೇಕೆಂದೇ ಭಗವಂತನು ನಮ್ಮನ್ನು ಈ ಮನೋಹರ ವಿಶ್ವದಲ್ಲಿ ಇಟ್ಟಿದ್ದಾನೆಂದು ನಾನು ನಂಬಿದ್ದೇನೆ. ನಾವು ಶ್ರೀಮಂತರಾಗಿರುವುದರಿಂದಾಗಲೀ, ನಮ್ಮ ಉದ್ಯೋಗದಲ್ಲಿ ಯಶಸ್ವಿಯಾಗಿರುವುದರಿಂದಾಲೀ ಅಥವಾ ಸ್ವಯಂಪಾಪಕ್ಷಮೆಯಿಂದಾಲೀ ಸುಖ ಉಂಟಾಗುವುದಿಲ್ಲ. ಸುಖ-ಸಂತೋಷಗಳತ್ತ ಇಡುವ ಒಂದು ಹೆಜ್ಜೆಯೆಂದರೆ, ನೀವು ಹುಡುಗರಾಗಿದ್ದಾಗ ನಿಮಗೆ ನೀವೇ ಆರೋಗ್ಯವಾಗಿರುವುದು ಮತ್ತು ಸಶಕ್ತರಾಗಿರುವುದು, ಆಗ ಮಾತ್ರ ನೀವು ಲೋಕಕ್ಕೆ ಬೇಕಾದವರಾಗಿರಬಹುದು ಮತ್ತು ದೊಡ್ಡವರಾದಾಗ ಬದುಕನ್ನು ಚೆನ್ನಾಗಿ ಅನುಭವಿಸಬಹುದು.

ನೀವು ಅನುಭವಿಸಲಿಕ್ಕಾಗಿಯೇ ಭಗವಂತ ಈ ವಿಶ್ವವನ್ನು ಎಷ್ಟು ಸುಂದರ ಮತ್ತು ಸೋಜಿಗದ ವಸ್ತುಗಳಿಂದ ತುಂಬಿದ್ದಾನೆ! ಇದು ನಿಸರ್ಗದ ಅಧ್ಯಯನದಿಂದ ನಿಮಗೆ ತಿಳಿಯುತ್ತದೆ. ನಿಮಗೆ ಇರುವಷ್ಟರಲ್ಲೇ ತೃಪ್ತಿಪಟ್ಟುಕೊಂಡು, ಅದರಿಂದಲೇ ಹೆಚ್ಚಿನ ಪ್ರಯೋಜನ ಪಡೆಯಿರಿ. ಕತ್ತಲೆ ಕವಿದ ಭಾಗವನ್ನು ನೋಡದೆ ಬೆಳಕಿರುವ ಭಾಗವನ್ನು ನೋಡಿ. ಏನಿದ್ದರೂ ಸುಖವನ್ನು ಪಡೆಯುವ ನಿಜವಾದ ಮಾರ್ಗವೆಂದರೆ ಇತರರಿಗೆ ಸುಖವನ್ನು ಕೊಡುವುದು. ಈ ಜಗತ್ತನ್ನು ನೀವು ಕಂಡುದಕ್ಕಿಂತ ಸ್ವಲ್ಪ ಉತ್ತಮವೆನಿಸುವಂತೆ ಮಾಡಿ. ಸಾಯುವ ಸಮಯ ಬಂದಾಗ, ಯಾವುದೇ ಕಾರಣಕ್ಕೆ ನಿಮ್ಮ ಸಮಯವನ್ನು ವ್ಯರ್ಥಗೊಳಿಸದೆ ಸಾಧ್ಯವಾದಷ್ಟೂ ಸಾರ್ಥಕ ಕೆಲಸಮಾಡಿದ್ದೇನೆಂಬ ತೃಪ್ತ ಭಾವನೆಯಿಂದ ನೀವು ಸುಖವಾಗಿ ಸಾಯಬಹುದು.

ಹೀಗೆ ಸುಖವಾಗಿ ಬದುಕಲು ಮತ್ತು ಸುಖವಾಗಿ ಸಾಯಲು ನೀವು 'ಸಿದ್ಧರಾಗಿ'. ನೀವು ಬಾಲ್ಯದ ಹಂತವನ್ನು ದಾಟಿ ದೊಡ್ಡವರಾದರೂ ನಿಮ್ಮ ಸ್ಕೌಟ್/ಗೈಡ್ಸ್ ಪ್ರತಿಜ್ಞೆಗೆ ಬದ್ಧರಾಗಿರಿ. ದೇವರು ನಿಮಗೆ ನೆರವಾಗುತ್ತಾನೆ.

ನಿಮ್ಮ ಸ್ನೇಹಿತ

Baden Powell of Gilwell

(ಲಾರ್ಡ್ ಬೇಡನ್ ಪೊವೆಲ್)

